KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಜನವರಿ ೪, ೨೦೦೭ (ಪುಷ್ಯ ೧೪, ಶಕ ವರ್ಷ ೧೯೨೮) | ಸಂಚಿಕೆ ೧ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಬಿ.ಸಿ. ಶಿವಲಿಂಗಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ನಂಜನಗೂಡು ತಾಲ್ಲೂಕು ಪ್ರಸ್ತುತ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಟಿ.ನರಸೀಪುರ ತಾಲ್ಲೂಕು ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:** 1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ ತನಿಖೆ/ ಪೊವಿ/ 2ಮ-18/ ಪ್ರ.ಸಂ.8/ 2005/ ಮೈಸೂರು ದಿನಾಂಕ:24.05.2006.

2. ತನಿಖಾಧಿಕಾರಿಯ ವರದಿ ಸಂಖ್ಯೆ: ಕಲೋ/ ಪೊವಿ/ ಮೈಪಿಎಸ್/ ಮೊಸಂ.08/ 2005, ದಿನಾಂಕ:22.05.2006.

**ಪ್ರಸ್ತಾವನೆ:**

ಶ್ರೀ ಬಿ.ಸಿ. ಶಿವಲಿಂಗಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ನಂಜನಗೂಡು ತಾಲ್ಲೂಕು, ಪ್ರಸ್ತುತ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಟಿ.ನರಸೀಪುರ ತಾಲ್ಲೂಕು ಇವರ ವಿರುದ್ಧ ಗುನ್ನೆ ಸಂಖ್ಯೆ:8/ 2005 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮೈಸೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಮೇಲೆ ಕ್ರಮಸಂಖ್ಯೆ: 2 ಮತ್ತು 3ರಲ್ಲಿ ಸೂಚಿಸಿರುವಂತೆ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ಪತ್ರದೊಡನೆ ಕಳುಹಿಸುತ್ತಾ, ಆಪಾದಿತರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ 19(1)(ಬಿ) ಮತ್ತು 197 ಸಿ.ಆರ್.ಪಿ.ಸಿ. ಅಡಿಯಲ್ಲಿ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ಪತ್ರದೊಂದಿಗೆ ಕ್ರಮಸಂಖ್ಯೆ 2 ರೊಂದಿಗೆ ಕಳುಹಿಸಿರುವ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ:

1. ಶ್ರೀ ಸಿದ್ದಿಕ್ ಅಹಮದ್ ಬಿನ್ ಲೇ: ಅಬ್ದುಲ್ ಗಫಾರ್, 32 ವರ್ಷ, ನಾರಾಯಣರಾವ್ ಅಗ್ರಹಾರ, ರಾಷ್ಟ್ರಪತಿ ರಸ್ತೆ, ನಂಜನಗೂಡು ಇವರ ಫಿರ್ಯಾದು ದಿನಾಂಕ:06.10.2005.
2. ಪ್ರಥಮ ವರ್ತಮಾನ ವರದಿ ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಮೈಸೂರು ಪ್ರಕರಣ ಸಂಖ್ಯೆ: 8: 2005.
3. ಪ್ರಾಯೋಗಿಕ ಪಂಚನಾಮೆ ದಿನಾಂಕ:06.10.2005.
4. ಟ್ರ್ಯಾಪ್‌ನ ಮಹಜರು ದಿನಾಂಕ:06.10.2005.
5. ರಾಸಾಯನಿಕ ಪರೀಕ್ಷಕರ ಪರೀಕ್ಷಣ ವರದಿ ಸಂಖ್ಯೆ: ಪಿಹೆಚ್/ ಸಿಎಂಇ/ ಎಲ್‌ಓಕೆ/ 68:05-06, ದಿನಾಂಕ:14.11.2005.
6. ಕೃತ್ಯ ನಡೆದ ಸ್ಥಳದ ನಕಾಶೆ.
7. ಸಾಕ್ಷಿದಾರರುಗಳಾದ ಶ್ರೀ ಸಿದ್ದಿಕ್ ಅಹಮದ್, ಶ್ರೀ ಮೀರ್‌ಜಾಫರ್‌ಆಲಿ, ಶ್ರೀ ವೀರಭದ್ರ, ಶ್ರೀ ವೆಂಕಟರಾಮು, ಶ್ರೀ ಎಸ್.ಸುರೇಶ್, ಶ್ರೀ ಜಮೀಲ್ ಅಹಮದ್, ಶ್ರೀ ಉದಯಶಂಕರ್ ಅರಸ್, ಶ್ರೀ ನಂಜುಂಡಸ್ವಾಮಿ, ಶ್ರೀ ವಿ. ಮುರಳೀಧರ್, ಶ್ರೀ ವಿ.ವಿ.ಸಣ್ಣಪ್ಪ, ಶ್ರೀ ಎಸ್. ಕೃಷ್ಣಮೂರ್ತಿ, ಶ್ರೀ ಟಿ.ಎಸ್. ಜಬಿಉಲ್ಲಾಬೇಗ್, ಶ್ರೀ ವಿ.ನಾಗೇಂದ್ರ, ಇವರುಗಳ ಹೇಳಿಕೆಗಳು.
8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ: 5.

   (ಅ) ಎಜಿಒ ರವರ ಕಛೇರಿ ಹಾಜರಾತಿ ನಕಲು ಅಕ್ಟೋಬರ್, 2005.

(ಆ) ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಮೈಸೂರು ಜಿಲ್ಲಾ ಪಂಚಾಯತ್ ರವರು ತಾಲ್ಲೂಕು ಪಂಚಾಯತ್, ನಂಜನಗೂಡು ರವರಿಗೆ 2005-06ನೇ ಸಾಲಿಗೆ ನಂಜನಗೂಡು ತಾಲ್ಲೂಕು ಅಂಗನವಾಡಿ ಕೇಂದ್ರಗಳಿಗೆ ಆಹಾರ ಸಾಮಗ್ರಿ ಸರಬರಾಜು ಹಾಗೂ ಸಾಗಾಣಿಕೆ ಸಂಬಂಧ ನೀಡಿರುವ ಟೆಂಡರ್ ಆದೇಶ ದಿನಾಂಕ:28.03.2005.

(ಇ) ತಾಲ್ಲೂಕು ಪಂಚಾಯತ್, ನಂಜನಗೂಡು ಕಾರ್ಯನಿರ್ವಹಣಾಧಿಕಾರಿಯವರು ನಂಜನಗೂಡು ತಾಲ್ಲೂಕಿನ ಅಂಗನವಾಡಿ ಕೇಂದ್ರಗಳಿಗೆ ಆಹಾರ ಸಾಮಗ್ರಿ ಸರಬರಾಜು ಹಾಗೂ ಸಾಗಾಣಿಕೆ ಸಂಬಂಧ ನೀಡಿರುವ ಟೆಂಡರ್ ಆದೇಶ ದಿನಾಂಕ:06.04.2005.

(ಈ) ಫಿರ್ಯಾದುದಾರರ ಅಣ್ಣ ಶ್ರೀ ಜಮೀಲ್ ಅಹಮದ್ ರವರು ನಂಜನಗೂಡು ತಾಲ್ಲೂಕಿನ ಅಂಗನವಾಡಿ ಕೇಂದ್ರಗಳಿಗೆ ಆಹಾರ ಸಾಮಗ್ರಿಗಳನ್ನು ಸಾಗಾಣಿಕೆ ಮಾಡುವ ಬಗ್ಗೆ ಮಾಡಿಕೊಂಡಿರುವ ಕರಾರು ಪತ್ರ ದಿನಾಂಕ:28.05.2005.

(ಉ) ಫಿರ್ಯಾದಿಯವರು ದಿನಾಂಕ:20.09.2005 ರಿಂದ ದಿನಾಂಕ:04.10.2005 ರವರೆಗೆ ಸೆಪ್ಟೆಂಬರ್ ಮಾಹೆಯ ಆಹಾರ ಸಾಮಗ್ರಿ ಸರಬರಾಜು ಮಾಡಿದ ಬಗ್ಗೆ ಪಟ್ಟಿ.

9. ಆಪಾದಿತರ ಸಮಜಾಯಿಶಿ ಹೇಳಿಕೆ.

ತನಿಖಾಧಿಕಾರಿಯಾದ ಶ್ರೀ ಬಿ. ಜಯರಾಮು, ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಮೈಸೂರು ಇವರು ಶ್ರೀ ಬಿ.ಸಿ. ಶಿವಲಿಂಗಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿಯವರ ವಿರುದ್ಧ ದಂಡಾರ್ಹ ಪ್ರಕರಣವನ್ನು, ಪೊಲೀಸ್ ನಿರೀಕ್ಷಕರ ಕಛೇರಿ ಕರ್ನಾಟಕ ಲೋಕಾಯುಕ್ತ, ಪೊಲೀಸ್ ಠಾಣೆ, ಮೈಸೂರು ಗುನ್ನೆ ಸಂಖ್ಯೆ:8:2005 ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ 7, 13 (1)(ಡಿ) ಜೊತೆಯಲ್ಲಿ 13(2)ರಡಿಯಲ್ಲಿ, ದಾಖಲಿಸಿಕೊಂಡಿರುತ್ತಾರೆ.

ಫಿರ್ಯಾದಿಯಾದ ಶ್ರೀ ಸಿದ್ಧಿಕ್ ಅಹಮದ್ ಬಿನ್ ಲೇ. ಅಬ್ದುಲ್ ಗಫಾರ್, ವಯಸ್ಸು 32 ವರ್ಷ, ನಾರಾಯಣರಾವ್ ಅಗ್ರಹಾರ, ರಾಷ್ಟ್ರಪತಿ ರಸ್ತೆ, ನಂಜನಗೂಡು ರವರ ಸಹೋದರ ಶ್ರೀ ಜಮೀಲ್ ಅಹಮದ್ ರವರು 2005-06ನೇ ಸಾಲಿಗೆ ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕು ವ್ಯಾಪ್ತಿಯ 510 ಅಂಗನವಾಡಿ ಕೇಂದ್ರಗಳಿಗೆ ಆಹಾರ ಸಾಮಗ್ರಿಗಳನ್ನು ಸಾಗಾಣಿಕೆ ಮಾಡುವ ಗುತ್ತಿಗೆ ಪಡೆದಿದ್ದು, ಸೆಪ್ಟೆಂಬರ್ 2005ರ ಆಹಾರ ಸಾಮಗ್ರಿ ಸಾಗಣೆ ಮಾಡಿದ ಬಿಲ್ಲು ರೂ.37,000/- ಮೊತ್ತದ ಚೆಕ್ ಪಡೆಯಲು ಆಪಾದಿತರಾದ ಶ್ರೀ ಬಿ.ಸಿ. ಶಿವಲಿಂಗಪ್ಪ, ಸಿ.ಡಿ.ಪಿ.ಓ., ನಂಜನಗೂಡು ಇವರನ್ನು ದಿನಾಂಕ:06.10.2005 ರಂದು ಭೇಟಿಯಾದಾಗ ಸದರಿ ಚೆಕ್ಕನ್ನು ನೀಡಲು ರೂ.7000/- ಮತ್ತು ಹಿಂದಿನ ತಿಂಗಳ ಬಾಕಿ ರೂ.2000/- ಒಟ್ಟು ರೂ.9000/- ಮೊತ್ತದ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ತಮ್ಮ ಅಣ್ಣನವರ ಇಚ್ಛೆಯಂತೆ ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಶ್ರೀ ಬಿ.ಸಿ. ಶಿವಲಿಂಗಪ್ಪರವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ಪಂಚರ ಸಮಕ್ಷಮದಲ್ಲಿ ನೆರವೇರಿಸಿದ ನಂತರ ದಿನಾಂಕ:06.10.2005ರಂದು ಮಂಡ್ಯದಲ್ಲಿರುವ ಮಂಡ್ಯ ಸ್ಪೋರ್ಟ್ಸ್ ಕ್ಲಬ್‌ನಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಬಿ.ಸಿ. ಶಿವಲಿಂಗಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿ ಅಕ್ರಮ ಸಂಭಾವನೆಯಾದ ರೂ.9000/- ಮೊತ್ತವನ್ನು ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿ ಹಾಕಿಕೊಂಡಿರುತ್ತಾರೆ. ಶ್ರೀ ಬಿ.ಸಿ. ಶಿವಲಿಂಗಪ್ಪನವರ ಬಲಗೈ ಮತ್ತು ಎಡಗೈ ಬೆರಳುಗಳನ್ನು ಪಂಚರ ಸಮಕ್ಷಮದಲ್ಲಿ ಪ್ರತ್ಯೇಕವಾಗಿ ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಯಿಸಿದ್ದು, ದ್ರಾವಣರೂಪವು ನಿಧಾನವಾಗಿ ತೆಳು ಗುಲಾಬಿ ಬಣ್ಣಕ್ಕೆ ತಿರುಗಿದ್ದು, ರಾಸಾಯನಿಕ ತಜ್ಞರ ಪರೀಕ್ಷೆಯ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ಬಿ.ಸಿ. ಶಿವಲಿಂಗಪ್ಪರವರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.9000/- ಮೊತ್ತವನ್ನು ಶ್ರೀ ಬಿ.ಸಿ. ಶಿವಲಿಂಗಪ್ಪರವರಿಂದ ಮಂಡ್ಯ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಸಾಕ್ಷಿಗಳ ಹೇಳಿಕೆಗಳನ್ನು ಮತ್ತು ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

ಆಪಾದಿತ ಅಧಿಕಾರಿಯ ಬಲಗೈ ಬೆರಳುಗಳು ಮತ್ತು ಎಡಗೈ ಬೆರಳುಗಳು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ತೆಳು ಗುಲಾಬಿ ಬಣ್ಣಕ್ಕೆ ತಿರುಗಿರುವುದು ಹಾಗೂ ಲಂಚದ ಹಣವನ್ನು ಇಟ್ಟಿದ್ದ ಅವರ ಪ್ಯಾಂಟ್‌ನ ವಾಚ್ ಪಾಕೇಟ್ ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ ತೆಳುಗುಲಾಬಿ ಬಣ್ಣಕ್ಕೆ ತಿರುಗಿರುವುದು ಇವುಗಳನ್ನೆಲ್ಲಾ ಗಮನಿಸಿದಾಗ ಅಧಿಕಾರಿಯು ಅಪರಾಧ ಎಸಗಿರುವರು ಎಂದು ಕಂಡು ಬಂದಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ, 1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ, ಶಿಕ್ಷಾರ್ಹ ಅಪರಾಧವೆಂದು ಎಸಗಿರುವುದು ಮೇಲ್ನೋಟಕ್ಕೆ ನನಗೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ, 1988ರ ಅನ್ವಯ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ಅಡಿಯಲ್ಲಿ, ಆಪಾದಿತರನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ, 1988ರ ಕಲಂ 19(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ಬಿ.ಸಿ. ಶಿವಲಿಂಗಪ್ಪ, ಪರಿವೀಕ್ಷಣಾಧಿಕಾರಿ ದರ್ಜೆ-1, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಸ್ತುತ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಟಿ-ನರಸೀಪುರ ಇವರನ್ನು ಕಲಂ 7 ಮತ್ತು 13(1)(ಡಿ)ರ ಜೊತೆಗೆ 13(2)ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ ಮತ್ತು ಕಡತದಲ್ಲಿ ಆದೇಶ ಮಾಡಿದೆ. ಅದರಂತೆ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 491 ಎಸ್‌ಜೆಡಿ 2005, ಬೆಂಗಳೂರು, ದಿನಾಂಕ:2ನೇ ಡಿಸೆಂಬರ್, 2006**

ಆರೋಪಿಗಳಾದ ಶ್ರೀ ಬಿ.ಸಿ. ಶಿವಲಿಂಗಪ್ಪ, ಪ್ರಸ್ತುತ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಟಿ.ನರಸೀಪುರ, ಇವರನ್ನು ಹುದ್ದೆಯಿಂದ ತೆಗೆದು ಹಾಕುವ/ ವಜಾಮಾಡುವ ಅಧಿಕಾರವುಳ್ಳ ಪ್ರಾಧಿಕಾರವಾದ ಸರ್ಕಾರವು ಶ್ರೀ ಬಿ.ಸಿ. ಶಿವಲಿಂಗಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಟಿ.ನರಸೀಪುರ ಇವರನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ 19(1)ರನ್ವಯ, ಕಲಂ7,13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿ ನೀಡಿದೆ.

ಮುಂದುವರೆದು, ಕರ್ನಾಟಕ ಸರ್ಕಾರ (ವ್ಯವಹಾರ) ನಿಯಮಾವಳಿ 1977 ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖನಗಳನ್ನು ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು.

ಅದೇ ನಿಯಮಾವಳಿಯ ನಿಯಮ 19(1)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖನಗಳು ಒಬ್ಬ ಅಧೀನಕಾರ್ಯದರ್ಶಿಯವರ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯ ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರ (ವ್ಯವಹಾರ) ನಿಯಮಾವಳಿ 1977ರ ಪ್ರಕಾರ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ:02.12.2006ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 1770

## PERSONNEL AND ADMINISTRATIVE REFORMS SECRETARIAT

**Sub:** Sanction of E.L. & Extraordinary Leave with compulsory waiting period of Smt. Renuka Chidambaram, IAS-Order.

**Read:** 1) Notification No.DPAR/ 481/ SAS/06, Dated:26.09.2006.

2) G.O.No.DPAR/ 137/ SME/ 05, Dated:13.09.2005.

3) Representation of Smt. Renuka Chidambaram, IAS, Dated:16.09.2006, 03.10.2005, 25.10.2006 & 28.10.2006.

**Preamble:**

As per Government Order No.DPAR/137/SME/05, read at 13.09.2005 Smt. Renuka Chidambaram, IAS was on training abroad from 01.09.2005 to 31.08.2006. On completion of the training, she availed earned leave for 15 days from 01.09.2006 to 15.09.2006 and reported under the State Government on 16.09.2006. While she was waiting for posting since 16.09.2006, she applied for combined leave (EL or/ & HPL) from 11.10.2006 to 30.03.2007 vide letter Dated:16.09.2006. accordingly including the earlier spell of leave availed by her before reporting for duty she was sanctioned earned leave from 01.09.2006 to 15.09.2006 and EL & HPL from 11.10.2006 to 30.03.2007 vide notification Dated:26.09.2006. Subsequently in her letter Dated:03.10.2006 she requested to convert EL/HPL from 11.10.2006 to 30.03.2007 into extraordinary leave (i.e. leave without salary). While the request was under process she sent another letter Dated:25.10.2006 and requested to cancel the EL & HPL sanctioned upto 31.03.2007, on the plea that she has not availed the same. Further in her subsequent letter Dated:28.10.2006 she has requested to sanction extra-ordinary leave from 07.11.2006 to 30.04.2007.

With regard to the request of the officer for cancellation of El & HPL from 11.10.2006 to 30.03.2007 sanctioned vide notification Dated:26.09.2006, the reason given by her is far from convincing. If she had no intention to avail any leave, she could have continued to wait for posting till she was given a posting. However she applied for leave from 11.10.2006. After having utilised the leave, she cannot plead to cancel the leave for that period. Therefore, the stand taken by her that she didn't avail the leave and hence to cancel it, is not acceptable.

As she was waiting for posting after submitting duty report on 16.09.2006 and applied for leave from 11.10.2006, only the period from 16.09.2006 to 10.10.2006 could be treated as compulsory waiting u/r 8(15)(f) of K.C.S.R. For the period from 11.10.2006 to 30.04.2007, she could be sanctioned extraordinary leave in view of request made by her vide letter Dated:03.10.2006 and 28.10.2006 to sanction extraordinary leave for whole period.

**Government Order No. DPAR 481 SAS 2006, Bangalore, Dated: 19$^{th}$ December, 2006**

The Earned Leave from 10.10.2006 to 30.11.2006 and Half Pay Leave from 01.12.2006 to 30.03.2007 sanctioned to Smt. Renuka CHidambaram, vide item 2 & 3 of Notification No.DPAR 481 SAS 2006, Dated:26.09.2006, is hereby cancelled and instead Smt. Renuka Chidambaram, IAS is sanctioned Extra-ordinary leave from 11.10.2006 to 30.04.2007 (bdi).

The period spent by her from 16.09.2006 to 10.10.2006 is treated as compulsory waiting u/r 8(15)(f) of KCSR.

By Order and in the name of Governor of Karnataka,

**M. VASUDEVAMURTHY**

Under Secretary to Government,

Department of Personnel and Administrative Reforms (Services-1).

PR-1772

## ಶಿಕ್ಷಣ ಸಚಿವಾಲಯ

**ವಿಷಯ:** 2006-07ನೇ ಸಾಲಿಗೆ ರಾಜ್ಯವಲಯ ಯೋಜನೆಯಡಿ ಮುಂದುವರಿಕೆ ಕಾರ್ಯಕ್ರಮಗಳಡಿ ಹೆಚ್ಚುವರಿ ಘಟಕಗಳ ಕಾರ್ಯಕ್ರಮವಾದ ಪಂಚ ಸೌಲಭ್ಯ ಯೋಜನೆಯ ಅನುಷ್ಠಾನದ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, (ಪ್ರಾಥಮಿಕ ಶಿಕ್ಷಣ) ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಯೋ(ಕ3). ಪ್ರಾ.ಶಾ.ಆ.ಮೈ.ಅ. ಕಾಂನಿ.39:2006-07/ ದಿನಾಂಕ:27.11.2006.

2. ಸರ್ಕಾರದ ಆದೇಶ ಸಂಖ್ಯೆ: ಇಡಿ:117: ಯೋಯೋಕ 2006 ದಿನಾಂಕ:24.06.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:27.11.2006ರ ನಿರ್ದೇಶಕರು, (ಪ್ರಾಥಮಿಕ ಶಿಕ್ಷಣ) ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರದಲ್ಲಿ 2006-07ನೇ ಸಾಲಿಗೆ ರಾಜ್ಯ ವಲಯ ಯೋಜನೆಯಡಿ ಮುಂದುವರಿಕೆ ಕಾರ್ಯಕ್ರಮಗಳಡಿ ಹೆಚ್ಚುವರಿ ಘಟಕಗಳ ಕಾರ್ಯಕ್ರಮವಾದ ಪಂಚಸೌಲಭ್ಯ ಯೋಜನೆಯ ಅನುಷ್ಠಾನಕ್ಕೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಲೆಕ್ಕಶೀರ್ಷಿಕೆ:2202-01-800-1-73-059 (ಪಿ.ವಿ.), ಯೋಜನೆಯಡಿ 508 ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಆಟದ ಮೈದಾನ ಅಭಿವೃದ್ಧಿಪಡಿಸಲು (ಪ್ರತಿ ಶಾಲೆಗೆ ಒಂದು ಎಕರೆಗೆ ರೂ.1.00 ಲಕ್ಷದಂತೆ), 800 ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಕಾಂಪೌಂಡ್ ನಿರ್ಮಿಸಲು (ಪ್ರತಿ ಶಾಲೆಗೆ ರೂ.0.50 ಲಕ್ಷದಂತೆ), ಒಟ್ಟು 908.00 ಲಕ್ಷಗಳನ್ನು ಒದಗಿಸಲಾಗಿದೆ ಎಂದು ತಿಳಿಸಿ ಈ ಮೊತ್ತವನ್ನು ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ ಎಂದು ತಿಳಿಸಿರುತ್ತಾರೆ.

ದಿನಾಂಕ:10.11.2006ರಂದು ನಡೆದ ಸಭೆಯ ನಡವಳಿಯಂತೆ ಪಂಚಸೌಲಭ್ಯ ಕಾರ್ಯಕ್ರಮಕ್ಕೆ ಲೆಕ್ಕಶೀರ್ಷಿಕೆ: 2202-01-800-1-73-059 (ಪಿ.ವಿ.), ಯೋಜನೆಯಡಿ ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಆಟದ ಮೈದಾನವನ್ನು ಗ್ರಾಮಪಂಚಾಯತ್‌ಗಳ ಮೂಲಕ ಅಭಿವೃದ್ಧಿ ಪಡಿಸಲು ಮತ್ತು ಕಾಂಪೌಂಡ್‌ನ್ನು ಎಸ್.ಡಿ.ಎಂ.ಸಿ. ಮೂಲಕ ನಿರ್ಮಿಸಲು ಸರ್ಕಾರದ ಅನುಮತಿ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 117 ಯೋಯೋಕಾ 2006, ಬೆಂಗಳೂರು, ದಿನಾಂಕ:8ನೇ ಡಿಸೆಂಬರ್, 2006**
**(ಇಡಿ: 108: ಸ್ಪೀಮರ (ಯುನಿಕ್) 2006 ದಿನಾಂಕ:08.12.2006))**

2006-07ನೇ ಸಾಲಿಗೆ ಲೆಕ್ಕಶೀರ್ಷಿಕೆ: 2202-01-800-1-73-059(ಪಿ.ವಿ.), ಯೋಜನೆಯಡಿ ಬಿಡುಗಡೆ ಮಾಡಲಾದ ಅನುದಾನದ ಮಿತಿಯೊಳಗೇ ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಆಟದ ಮೈದಾನವನ್ನು ಗ್ರಾಮಪಂಚಾಯತ್‌ಗಳ ಮೂಲಕ ಅನುಷ್ಠಾನಗೊಳಿಸಲು ಮತ್ತು ಶಾಲೆಗಳಿಗೆ ಕಾಂಪೌಂಡ್ ನಿರ್ಮಾಣ ಕಾರ್ಯವನ್ನು ಆಶ್ರಯ ಮನೆಗಳ ನಿರ್ಮಾಣಕ್ಕೆ ಜಮೀನನ್ನು ವಶಪಡಿಸಿಕೊಳ್ಳುವ ಮಾದರಿಯಲ್ಲಿ ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ ಮೂಲಕ ಅನುಷ್ಠಾನಗೊಳಿಸಲು ಸರ್ಕಾರವು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿರುತ್ತದೆ.

ಈ ಅನುಮತಿಯು ದಿನಾಂಕ:24.06.2006, ಸಂಖ್ಯೆ: ಇಡಿ: 117: ಯೋಯೋಕ 2006ರ ಸರ್ಕಾರಿ ಆದೇಶದ ಅನುಬಂಧ ಕಂಡಿಕೆ 3(ಇ) (1) (2) (3)ರ ಷರತ್ತುಗಳಿಗೆ ಒಳಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ).

ಪಿ.ಆರ್. 1773

**ವಿಷಯ:** ರಾಜ್ಯದ ಕೇಂದ್ರ ಗ್ರಂಥಾಲಯವನ್ನು ಆಧುನೀಕರಣಗೊಳಿಸುವ ಕಾಮಗಾರಿಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ರವರ ಪತ್ರಸಂಖ್ಯೆ: ಸಾಗ್ರಂಇ-ನಿಕ-ಬಿ1/ 12/ 12ನೇ ಹಣಕಾಸು/ 2005-06 ದಿನಾಂಕ:06.06.2006.

**ಪ್ರಸ್ತಾವನೆ:**

1. ಮೇಲೆ ಓದಲಾದ ದಿನಾಂಕ:06.06.2006ರ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರ ಪತ್ರದಲ್ಲಿ ಕೇಂದ್ರ ಸರ್ಕಾರದ ಹನ್ನೆರಡನೇ ಹಣಕಾಸು ಆಯೋಗದ "Heritage Conservation" ಅಡಿಯಲ್ಲಿ ನೀಡಲಿರುವ ರೂ.50.00 ಕೋಟಿಗಳಲ್ಲಿ ಸಾರ್ವಜನಿಕ ಗ್ರಂಥಾಲಯಗಳ ಇಲಾಖೆಗೆ ರೂ.5.00 ಕೋಟಿಗಳನ್ನು ಒದಗಿಸಿದ್ದು, ರಾಜ್ಯ ಕೇಂದ್ರ ಗ್ರಂಥಾಲಯದ ಸಂಪೂರ್ಣ ಕಾಮಗಾರಿಗಾಗಿ ಲೋಕೋಪಯೋಗಿ ಇಲಾಖೆಯವರು ರೂ.150.00 ಲಕ್ಷಗಳಿಗೆ ಅಂದಾಜನ್ನು ಹಾಗೂ ಉಳಿದ ಇತರೆ ಕಾಮಗಾರಿಗಳಿಗೆ ರೂ.69.80 ಲಕ್ಷಗಳಿಗೆ ಅಂದಾಜನ್ನು ಸಲ್ಲಿಸಿದ್ದಾರೆ ಎಂದು ತಿಳಿಸಿ, 2006-07ನೇ ಸಾಲಿಗೆ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ರೂ.187.50 ಲಕ್ಷಗಳು ಮಂಜೂರಾಗಿದ್ದು, ಸದರಿ ಮೊತ್ತದಲ್ಲಿ

| | |
|---|---|
| (1) ರಾಜ್ಯ ಕೇಂದ್ರ ಗ್ರಂಥಾಲಯ ಕಟ್ಟಡ ನವೀಕರಣಕ್ಕಾಗಿ | ರೂ.150.00 ಲಕ್ಷ |
| (2) ಇಂದಿರಾ ಪ್ರಿಯದರ್ಶಿನಿ ಮಕ್ಕಳ ಗ್ರಂಥಾಲಯ, ಕಬ್ಬನ್ ಪಾರ್ಕ್ ದುರಸ್ತಿಗಾಗಿ | ರೂ.20.00 ಲಕ್ಷ |
| (3) ಜಿಲ್ಲಾ ಕೇಂದ್ರ ಗ್ರಂಥಾಲಯ ಗುಲ್ಬರ್ಗಾ ಇದರಲ್ಲಿನ 47,500 ಪುಸ್ತಕಗಳ ಸಂರಕ್ಷಣೆಗಾಗಿ (ಮತ್ತು 9 ಇದರ ಶಾಖೆಗಳಲ್ಲಿ) | ರೂ.9.50 ಲಕ್ಷ |
| (4) ಜಿಲ್ಲಾ ಕೇಂದ್ರ ಗ್ರಂಥಾಲಯ ಬಳ್ಳಾರಿ ಹಾಗೂ ಇದರ 5 ಶಾಖೆಗಳಲ್ಲಿ 40,000 ಪುಸ್ತಕಗಳ ಸಂರಕ್ಷಣೆಗಾಗಿ | ರೂ.8.00 ಲಕ್ಷ |
| **ಒಟ್ಟು** | **ರೂ.187.50 ಲಕ್ಷ** |

2. ಈ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಲು ಅನುಮೋದನೆ ದೊರೆತಿದ್ದು, ಸದರಿ ಕಾರ್ಯಕ್ರಮಗಳನ್ನು ದಿನಾಂಕ:31.03.2006ರೊಳಗಾಗಿ ಅನುಷ್ಠಾನಗೊಳಿಸಬೇಕಾಗಿದ್ದು, ಮೇಲ್ಕಂಡ 1 ಮತ್ತು 2ರಲ್ಲಿ ನಮೂದಿಸಿರುವ ಕಾರ್ಯಕ್ರಮಗಳನ್ನು ಕರ್ನಾಟಕ ಲೋಕೋಪಯೋಗಿ ಇಲಾಖೆಯಿಂದ ನಿರ್ವಹಿಸಲು 3 ಮತ್ತು 4ರ ಮುಂದೆ ನಮೂದಿಸಿರುವ ಕಾರ್ಯಕ್ರಮಗಳನ್ನು ಕರ್ನಾಟಕ ಪಾರದರ್ಶಕ ಕಾಯ್ದೆ ಪಾಲಿಸುವ ಷರತ್ತಿನೊಂದಿಗೆ ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

3. ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 231 ಯೋಯೋಕಾ 2006, ಬೆಂಗಳೂರು, ದಿನಾಂಕ:1ನೇ ಡಿಸೆಂಬರ್, 2006**

**(ಇಡಿ: 106: ಸ್ಕೀಮರ (ಯುನಿಕ್) 2006 ದಿನಾಂಕ:01.12.2006))**

4. ದಿನಾಂಕ:16.11.2006, ಸಂಖ್ಯೆ: ಎಸ್.ಕೆ.ಡಿ: 181: ಕೆ.ಎಂ.ಯು. 2005ರ ಸರ್ಕಾರಿ ಆದೇಶದಲ್ಲಿ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ 187.50 ಲಕ್ಷ ರೂ.ಗಳನ್ನು (ಒಂದು ನೂರಾ ಎಂಭತ್ತೇಳು ಲಕ್ಷದ ಐವತ್ತು ಸಾವಿರ ರೂ.ಗಳು ಮಾತ್ರ) ಒದಗಿಸಿ, ಅದರಲ್ಲಿ ಮೊದಲನೇ ಕಂತಾಗಿ 93.75 ಲಕ್ಷರೂ.ಗಳನ್ನು (ತೊಂಭತ್ತೂರು ಲಕ್ಷದ ಎಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಬಿಡುಗಡೆ ಮಾಡಿರುತ್ತಾರೆ.

5. 2006-07ನೇ ಸಾಲಿಗೆ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಒದಗಿಸಿರುವ 187.50 (ಒಂದು ನೂರಾ ಎಂಭತ್ತೇಳು ಲಕ್ಷದ ಐವತ್ತುಸಾವಿರ ರೂ.ಗಳು ಮಾತ್ರ) ಲಕ್ಷರೂ.ಗಳನ್ನು ಈ ಕೆಳಕಂಡ ಕಾರ್ಯಕ್ರಮಗಳಿಗೆ ಹಂಚಿಕೆ ಮಾಡಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

| | |
|---|---|
| (1) ರಾಜ್ಯ ಕೇಂದ್ರ ಗ್ರಂಥಾಲಯ ಕಟ್ಟಡ ನವೀಕರಣಕ್ಕಾಗಿ | ರೂ.150.00 ಲಕ್ಷ |
| (2) ಇಂದಿರಾ ಪ್ರಿಯದರ್ಶಿನಿ ಮಕ್ಕಳ ಗ್ರಂಥಾಲಯ, ಕಬ್ಬನ್ ಪಾರ್ಕ್ ದುರಸ್ತಿಗಾಗಿ | ರೂ.20.00 ಲಕ್ಷ |
| (3) ಜಿಲ್ಲಾ ಕೇಂದ್ರ ಗ್ರಂಥಾಲಯ ಗುಲ್ಬರ್ಗಾ ಇದರಲ್ಲಿನ 47,500 ಪುಸ್ತಕಗಳ ಸಂಕರ್ಕ್ಷಣೆಗಾಗಿ (ಮತ್ತು 9 ಇದರ ಶಾಖೆಗಳಲ್ಲಿ) | ರೂ.9.50 ಲಕ್ಷ |
| (4) ಜಿಲ್ಲಾ ಕೇಂದ್ರ ಗ್ರಂಥಾಲಯ ಬಳ್ಳಾರಿ ಹಾಗೂ ಇದರ 5 ಶಾಖೆಗಳಲ್ಲಿ 40,000 ಪುಸ್ತಕಗಳ ಸಂರಕ್ಷಣೆಗಾಗಿ | ರೂ.8.00 ಲಕ್ಷ |
| **ಒಟ್ಟು** | **ರೂ.187.50 ಲಕ್ಷ** |

6. ಮೇಲ್ಕಂಡ ಕಾರ್ಯಕ್ರಮಗಳನ್ನು ಕೆಳಕಂಡ ಷರತ್ತುಗಳಿಗೊಳಪಡಿಸಿ ಅನುಷ್ಠಾನಗೊಳಿಸಲು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆರವರಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

**ಷರತ್ತುಗಳು:**

1. ಕಂಡಿಕೆ-5ರ 1 ಮತ್ತು 2ರಲ್ಲಿ ನಮೂದಿಸಿರುವ ಕಾಮಗಾರಿಗಳನ್ನು ಕರ್ನಾಟಕ ಲೋಕೋಪಯೋಗಿ ಇಲಾಖೆಯಿಂದ ನಿರ್ವಹಿಸತಕ್ಕದ್ದು. ಇವುಗಳಲ್ಲಿ ಉಪಕರಣಗಳ ಖರೀದಿಗೆ ಸಂಬಂಧಿಸಿದಂತೆ ಮತ್ತು ಕಂಡಿಕೆ-5ರ 3 ಮತ್ತು 4ರಲ್ಲಿ ನಮೂದಿಸಿರುವ ಕಾರ್ಯಕ್ರಮಗಳನ್ನು ಕರ್ನಾಟಕ ಪಾರದರ್ಶಕ ಮತ್ತು ಸಾರ್ವಜನಿಕ ಸಂಗ್ರಹಣೆ ಅಧಿನಿಯಮ 2000 ಕಾಯ್ದೆಯ ಎಲ್ಲಾ ನಿಯಮಗಳನ್ನು ತಪ್ಪದೇ ಪಾಲಿಸುವ ಷರತ್ತನ್ನು ವಿಧಿಸಲಾಗಿದೆ.
2. ಆಡಳಿತಾತ್ಮಕ ಅನುಮೋದನೆ ನೀಡಿರುವ ಕಾರ್ಯಕ್ರಮಗಳನ್ನು ಮೊದಲನೆ ಕಂತಾದ 93.75 ಲಕ್ಷ ರೂ.ಗಳಲ್ಲಿ (ತೊಂಭತ್ತೂರು ಲಕ್ಷದ ಎಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಅನುಷ್ಠಾನಗೊಳಿಸತಕ್ಕದ್ದು. ಮೊದಲನೇ ಕಂತನ್ನು ಸಂಪೂರ್ಣವಾಗಿ ಬಳಸಿಕೊಂಡಿರುವುದಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

7. ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಹಮತಿಯನ್ನು ಅ.ಟಿ. ಸಂಖ್ಯೆ: ಶಿಇ:895: ಐಎಫ್ (ಎ ಮತ್ತು ಬಿ) 2006 ದಿನಾಂಕ:23.09.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1774

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಎಂ. ತಿಪ್ಪೇಶ್, ಕೆ.ಎಂ.ಎ.ಎಸ್., ಆಯುಕ್ತರು, ಗುಲ್ಬರ್ಗಾ ಮಹಾನಗರ ಪಾಲಿಕೆ, ಇವರು ಅಕ್ರಮ ಹಾಗೂ ಕರ್ತವ್ಯ ಚ್ಯುತಿ ಎಸಗಿರುವುದರಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಹಾಗೂ ಆಡಳಿತಾಧಿಕಾರಿಗಳು, ಗುಲ್ಬರ್ಗಾ ಮಹಾನಗರ ಪಾಲಿಕೆರವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಡಿಯುಡಿಸಿ/ ಇಎಸ್‌ಟಿ/ 310/ 2006-07 ದಿನಾಂಕ14.11.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಹಾಗೂ ಗುಲ್ಬರ್ಗಾ ಮಹಾನಗರ ಪಾಲಿಕೆಯ ಆಡಳಿತಾಧಿಕಾರಿಗಳು, ಪಾಲಿಕೆಯ ಆಯುಕ್ತರಾದ ಶ್ರೀ ತಿಪ್ಪೇಶ್, ಕೆ.ಎಂ.ಎ.ಎಸ್. ಇವರು ನಿರ್ಮಲ ನಗರ ಯೋಜನೆಯ ಘಟಕವಾದ ಘನ ತ್ಯಾಜ್ಯ ವಸ್ತುಗಳ ನಿರ್ವಹಣೆಗೆ ಸಂಬಂಧಿಸಿದಂತೆ ಪಾಲಿಕೆಯ ಆಡಳಿತಾಧಿಕಾರಿಗಳ ಗಮನಕ್ಕೆ ತಾರದೇ ತಮ್ಮ ಹಂತದಲ್ಲಿಯೇ ಯಾವುದೇ ಕಾರಣವನ್ನು ನೀಡದೇ ಟೆಂಡರ್ ರದ್ದುಪಡಿಸಿರುತ್ತಾರೆಂದೂ, ಟೆಂಡರನ್ನು ರದ್ದುಪಡಿಸಿದ ನಂತರ ಮತ್ತೆ ಹೊಸದಾಗಿ ಟೆಂಡರನ್ನು ಆಹ್ವಾನಿಸಿದ್ದು ಸದರಿ ಟೆಂಡರ್‌ಗೆ ಪಾಲಿಕೆಯ ಆಡಳಿತಾಧಿಕಾರಿಗಳ ಅನುಮತಿಯನ್ನು ಪಡೆಯದೇ ಕೆ.ಟಿ.ಪಿ.ಪಿ. ಕಾಯ್ದೆ/ ನಿಯಮಾವಳಿಗಳನ್ನು ಉಲ್ಲಂಘಿಸಿರುತ್ತಾರೆಂದು ವರದಿ ಮಾಡಿರುತ್ತಾರೆ. ಇದಲ್ಲದೇ ನಿರ್ಮಲ ನಗರ ಯೋಜನೆಯ ಇತರೆ ಘಟಕಗಳಾದ ಜಿ.ಐ.ಎಸ್. ಸರ್ವೆ, ಎಫ್.ಬಿ.ಎ.ಎಸ್. ಸ್ವಯಂ ಘೋಷಿತ ಆಸ್ತಿ, ತೆರಿಗೆ, ಜನನ ಮತ್ತು ಮರಣಗಳ ಕಂಪ್ಯೂಟರೀಕರಣ ಮುಂತಾದವುಗಳನ್ನು ಸೂಕ್ತವಾಗಿ ಕಾರ್ಯಗತಗೊಳಿಸಲು ಯಾವುದೇ ಆಸಕ್ತಿಯನ್ನು ತೋರಿಸುತ್ತಿಲ್ಲವೆಂದು ಮತ್ತು ಪಾಲಿಕೆಯ ಅಧಿಕಾರಿ/ ನೌಕರ ವರ್ಗದವರ ಮೇಲೆ ಯಾವುದೇ ನಿಯಂತ್ರಣವನ್ನು ಹೊಂದಿರದೇ ಇರುವುದರಿಂದ ಪಾಲಿಕೆಯ ವಿವಿಧ ಶಾಖೆಗಳ ನಡುವೆ ಸಮನ್ವಯದ ಕೊರತೆ ಕಂಡುಬರುತ್ತದೆಂದು ವರದಿ ಮಾಡಿರುತ್ತಾರೆ. ಮಹಾನಗರ ಪಾಲಿಕೆಯ ಯೋಜನೆಗಳಿಗೆ ಸಕ್ಷಮ ಪ್ರಾಧಿಕಾರದ ಅನುಮತಿಯಿಲ್ಲದೇ ವಿನಾ ಕಾರಣ ಹೆಚ್ಚಿನ ವೆಚ್ಚವನ್ನು ಮಾಡಿದ್ದು ಕೆಲವೆಡೆ ಅಂದಾಜು ಪಟ್ಟಿಯನ್ನು ವಿಂಗಡಿಸಿ ತುಂಡು ಕಾಮಗಾರಿಗೆ ಅನುವು ಮಾಡಿರುವುದರಿಂದ ಕಳಪೆ ಕಾಮಗಾರಿ, ಪಾರದರ್ಶಕದ ಕೊರತೆ ಉದ್ಭವಿಸಿರುತ್ತದೆ. ಮುಂದುವರಿದು ಮನ ಬಂದಂತೆ ಹೆಚ್ಚುವರಿಯಾಗಿ ಬಿಲ್ಲುಗಳ ಪಾವತಿಯನ್ನು ಮಾಡಿ ಕಾರ್ಯ ನಿರ್ವಹಿಸಿರುವುದೂ ಕೂಡಾ ಗಮನಕ್ಕೆ ಬಂದಿದೆಯೆಂದು ವರದಿ ಮಾಡಿರುತ್ತಾರೆ. ಇದಲ್ಲದೇ ಹನ್ನೆರಡನೆಯ ಹಣಕಾಸು ಆಯೋಗ, ಎಸ್.ಎಫ್.ಸಿ. ಧನಸಹಾಯ ಮತ್ತು ಕುಡಿಯುವ ನೀರಿನ ಪೂರೈಕೆಗಾಗಿ ಪರಿಹಾರ ಧನ ಕಾರ್ಯಕ್ರಮಗಳ ಅಡಿಯಲ್ಲಿ ಬಿಡುಗಡೆಯಾದ ಹಣವನ್ನು ಪರಿಣಾಮಕಾರಿಯಾಗಿ

ವಿನಿಯೋಗಿಸಲು ಕೂಡ ಆಯುಕ್ತರು ಯಾವುದೇ ಆಸಕ್ತಿಯನ್ನು ತೋರಿರುವುದಿಲ್ಲ. ಗುಲ್ಬರ್ಗಾ ಮಹಾನಗರ ಪಾಲಿಕೆಯ ನೀರು ಸರಬರಾಜು ವಿತರಣೆಯ ಉಸ್ತುವಾರಿಯಲ್ಲಿಯೂ ಸಹಾ ಸಂಪೂರ್ಣವಾಗಿ ವಿಫಲರಾಗಿದ್ದು ಇದರಿಂದ ಕಾನೂನು ಮತ್ತು ಸುವ್ಯವಸ್ಥೆಯ ತೊಂದರೆಯುಂಟಾಗಿದೆಯೆಂದು ತಿಳಿಸುತ್ತಾ, ಸಾರ್ವಜನಿಕ ನೈರ್ಮಲ್ಯ ಮತ್ತು ಒಳಚರಂಡಿ ವ್ಯವಸ್ಥೆಯ ಕಡೆ ಸೂಕ್ತ ಗಮನ ಹರಿಸದೇ ಇರುವುದರಿಂದ ಡೆಂಗ್ಯೂ, ಚಿಕೂನ್ ಗುನ್ಯಾ ಮುಂತಾದ ರೋಗಗಳು ಹರಡಿರುತ್ತದೆಂದು ವರದಿ ಮಾಡಿರುತ್ತಾರೆ. ಮುಂದುವರಿದು ಅನಧಿಕೃತ ಕಟ್ಟಡಗಳ ನಿರ್ಮಾಣಗಳ ಬೆಳವಣಿಗೆಗಳನ್ನು ತಡೆಗಟ್ಟುವಲ್ಲಿ ಸಂಪೂರ್ಣ ವಿಫಲರಾಗಿದ್ದು ಓಂ ನಮಃ ಶಿವಾಯ ಬಿಲ್ಡರ್ಸ್ ಪ್ರಕರಣದಲ್ಲಿ ರದ್ದಾಗಿದ್ದ ಕಟ್ಟಡ ಲೈಸೆನ್ಸನ್ನು ನಿಯಮಾವಳಿಯ ವಿರುದ್ಧ ಮತ್ತೆ ನೀಡಿ ವಿವಾದವನ್ನು ಸೃಷ್ಟಿಸಿರುತ್ತಾರೆಂದು ವರದಿ ಮಾಡಿರುತ್ತಾರೆ. ಈ ಕಾರಣಗಳ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮವನ್ನು ಜರುಗಿಸುವಂತೆ ಮತ್ತು ಇವರು ಎಸಗಿರುವ ಅಕ್ರಮಗಳ ಕುರಿತು ವಿಶೇಷ ತನಿಖೆಯನ್ನು ನಡೆಸುವಂತೆ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 65 ಎಸಿಜಿ 2006, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವೆಗಳ (ಸಿಸಿಎ) ನಿಯಮ 1957ರ ನಿಯಮ 10 (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ತಿಪ್ಪೇಶ್, ಕೆ.ಎಂ.ಎ.ಎಸ್, ಆಯುಕ್ತರು, ಗುಲ್ಬರ್ಗಾ ಮಹಾನಗರ ಪಾಲಿಕೆ, ಇವರನ್ನು ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ ನಿಯಮಗಳು ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಸದರಿ ಅಧಿಕಾರಿಯವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್‌ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1775

## ಕಾರ್ಮಿಕ ಸಚಿವಾಲಯ

**ವಿಷಯ:** ಶಿಸ್ತು ನಡವಳಿಗಳು- ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ) ಮತ್ತು ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ, ಉದ್ಯೋಗ ಮತ್ತು ತರಬೇತಿ ಇಲಾಖೆ-ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಾಇ 149 ಇಟಿಎಕ್ಸ್ 2001 (ಭಾ) ದಿನಾಂಕ:29.10.2001.

2. ಅರೆ ಸರ್ಕಾರಿ ಪತ್ರ ಸಂಖ್ಯೆ: ಕಂಪ್ಲೇಂಟ್/ ಉಪಲೋಕ್/ ಬಿಸಿಡಿ-192/ 2000-01 ಡಿಆರ್‌ಇ-2 ದಿನಾಂಕ:05.12.2001.
3. ಸರ್ಕಾರಿ ಆದೇಶ ಸಂಖ್ಯೆ: ಕಾಇ 97 ಇಟಿಎಕ್ಸ್ 2001 ದಿನಾಂಕ:20.03.2002.
4. ಆದೇಶ ಸಂಖ್ಯೆ: ಲೋಕ್/ ಐಎನ್‌ಕ್ಯೂ/ 15/ 14-ಎ/ 2002-03 ದಿನಾಂಕ:05.06.2002.
5. ಪತ್ರಸಂಖ್ಯೆ: LOK/ ARE-3/ ENQ.60/ 2002-03, Dated:03.08.2005.
6. ಎರಡನೇ ಕಾರಣ ಕೇಳುವ ನೋಟಿಸ್ ಸಂಖ್ಯೆ: ಕಾಇ 149 ಇಟಿಎಕ್ಸ್ 2000 (ಭಾ) ದಿನಾಂಕ:17:18.10.2005.
7. ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ) ರವರ ಲಿಖಿತ ಹೇಳಿಕೆ ದಿನಾಂಕ:15.12.2005 ಮತ್ತು ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ ರವರ ಲಿಖಿತ ಹೇಳಿಕೆ ದಿನಾಂಕ:06.12.2005.

**ಪ್ರಸ್ತಾವನೆ:**

ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಉದ್ಯೋಗ ಮತ್ತು ತರಬೇತಿ ಇಲಾಖೆ, ಇವರು ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕಛೇರಿ, ಬೆಂಗಳೂರು ಇಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 1997-98ನೇ ಸಾಲಿನಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ ಅರ್ಹ ಅಭ್ಯರ್ಥಿಗಳ ಪಟ್ಟಿ ಕಳುಹಿಸುವಲ್ಲಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಕಾನೂನಿಗೆ ವಿರುದ್ಧವಾಗಿ ನೊಂದಾಯಿಸಿಕೊಂಡು ಅಕ್ರಮವಾಗಿ ಶಿಕ್ಷಣ ಇಲಾಖೆಗೆ ಶಿಕ್ಷಕರ ನೇಮಕಾತಿ ಪಟ್ಟಿಯನ್ನು ಕಳುಹಿಸಿರುವರೆಂಬ ಆರೋಪದ ಕಾರಣ ಹಾಗೂ ಅವರು ತಮ್ಮ ಆದಾಯಕ್ಕೆ ಮೀರಿದ ಅಕ್ರಮ ಆಸ್ತಿ ಗಳಿಸಿರುವರೆಂಬ ಆರೋಪಕ್ಕೆ ಸಂಬಂಧಿಸಿದಂತೆ ವಿವರವಾದ ತನಿಖೆಯನ್ನು ನಡೆಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಕರಣವನ್ನು ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿತ್ತು.

ಕರ್ನಾಟಕ ಲೋಕಾಯುಕ್ತದ ನಿಬಂಧಕರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದೊಂದಿಗೆ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ಮತ್ತು ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ), ಉಪಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇವರ ವಿರುದ್ಧದ ಕರ್ತವ್ಯ ಲೋಪದ ಬಗೆಗಿನ ತನಿಖಾವರದಿಯನ್ನು ಸರ್ಕಾರಕ್ಕೆ ಕಳುಹಿಸಿದ್ದರು. ಒಂದನೇ ಆರೋಪಿತ ಸರ್ಕಾರಿ ಅಧಿಕಾರಿಯು 24 ಪ್ರಕರಣಗಳಲ್ಲಿ ಮತ್ತು ಎರಡನೇ ಆರೋಪಿತ ಸರ್ಕಾರಿ ಅಧಿಕಾರಿಯು 151 ಪ್ರಕರಣಗಳಲ್ಲಿ ಅಭ್ಯರ್ಥಿಗಳ ಹೆಸರುಗಳನ್ನು ನೊಂದಣಿ ಮಾಡುವಲ್ಲಿ ಕಾನೂನು ನಿಯಮಾವಳಿಗಳನ್ನು ಪಾಲಿಸಿರುವುದಿಲ್ಲ ಮತ್ತು ಕಾನೂನಿನ ರೀತಿ ನಿಯಮಗಳಿಗೆ ಅನುಸಾರ ಮತ್ತು ಸುತ್ತೋಲೆಗಳಿಗನುಸಾರವಾಗಿ ಕ್ರಮ ಕೈಗೊಳ್ಳದೇ ವ್ಯತ್ಯಯ ಮಾಡಿರುವುದು ಮೇಲ್ನೋಟಕ್ಕೆ ತನಿಖೆಯಿಂದ ಕಂಡುಬಂದಿದೆಯೆಂದು ತನಿಖಾಧಿಕಾರಿಯು ವರದಿ ಮಾಡಿದ್ದರು.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ಮತ್ತು ಶ್ರೀಮತಿ ಕುತೇಜ ಫೈರೋಜ, ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ), ಉಪಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳ, ನಿಯಮ 14-ಎ ಪ್ರಕಾರ ಇಲಾಖಾ ವಿಚಾರಣೆಯನ್ನು ಜರುಗಿಸಲು ಪ್ರಕರಣವನ್ನು ಮಾನ್ಯ ಉಪಲೋಕಾಯುಕ್ತ, ಬೆಂಗಳೂರುರವರಿಗೆ ವಹಿಸಲಾಗಿತ್ತು.

ಕರ್ನಾಟಕ ಲೋಕಾಯುಕ್ತವು ಮೇಲೆ (4)ರಲ್ಲಿ ಓದಲಾದ ತಮ್ಮ ಆದೇಶದಲ್ಲಿ ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಮತ್ತು ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ), ಉದ್ಯೋಗ ಮತ್ತು ತರಬೇತಿ ಇಲಾಖೆ, ಇವರ ವಿರುದ್ಧ ಆರೋಪಗಳನ್ನು ರಚಿಸಿ ವಿಚಾರಣೆಯನ್ನು ಜರುಗಿಸಲು ಉಪನಿಬಂಧಕರು, ವಿಚಾರಣೆ-1, ಲೋಕಾಯುಕ್ತ, ಬೆಂಗಳೂರುರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿತ್ತು.

ವಿಚಾರಣಾಧಿಕಾರಿಯು, ಒಂದನೇ ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ) ರವರ ವಿರುದ್ಧ ಈ ಕೆಳಗಿನ ಆರೋಪವನ್ನು ಹೊರಿಸಿದ್ದರು.

That Sri C.L. Kittur while working as Asst. Director, Sub Regional Employment Exchange, Bangalore, during 1997-98 has illegally registered the names of 24 candidates in the Sub-regional Employment Exchange, Bangalore belonging to other districts for his personal gain in violation of circular instructions Dated:28.02.1994 and 09.10.1997 of Directorate of Employment and Training. Further DGO has not followed the rules and procedures regarding registration of un-employed youths. By sponsoring the said candidates for the post of primary school teachers, DGO deprived the opportunity of the candidates belonging to Bangalore. So DGO has failed to maintain integrity and did an act which is unbecoming of a Government servant as per clauses 3(1)(i) (ii) and (iii) of KCS (Conduct) Rules, 1966.

ವಿಚಾರಣಾಧಿಕಾರಿಯು, ಎರಡನೇ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀಮತಿ ಕುತೇಜ ಫೈರೋಜ್‌ರವರ ವಿರುದ್ಧ ಈ ಕೆಳಗಿನ ಆರೋಪವನ್ನು ಹೊರಿಸಿದ್ದರು.

That Smt. Khuteja Firoz, while working as Employment officer, Vocational Guidance, Sub-regional Employment Exchange, Bangalore during 1997-98 has illegally registered the names of 151 candidates in the sub-regional Employment Exchange, Bangalore belonging to other districts for her personal gain. In violation of circular instructions Dated:28.02.1994 and 09.10.1997 of Directorate of Employment and Training. Further DGO has not followed the rules and procedures regarding registration of un-employed youths. By sponsoring the said candidates for the post of primary school teachers, DGO deprived the opportunity of the candidates belonging to Bangalore. So DGO has failed to maintain integrity and did an act which is unbecoming of a Government servant as per clauses 3(1)(i)(ii) and (iii) of KCS (Conduct) Rules 1966.

ಮಾನ್ಯ ಉಪಲೋಕಾಯುಕ್ತ, ಕರ್ನಾಟಕ ರಾಜ್ಯ, ಬೆಂಗಳೂರು ರವರು ಮೇಲೆ (5)ರಲ್ಲಿ ಓದಲಾದ, ತಮ್ಮ ಪತ್ರದೊಂದಿಗೆ ಆಪಾದಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ಮತ್ತು ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ), ಉಪಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇವರ ವಿರುದ್ಧದ ಆರೋಪಗಳ ಬಗೆಗಿನ ಇಲಾಖಾ ವಿಚಾರಣಾ ವರದಿಯನ್ನು ಕಳುಹಿಸುತ್ತಾ ಆಪಾದಿತ ಸರ್ಕಾರಿ ಅಧಿಕಾರಿಗಳಿಬ್ಬರ ವಿರುದ್ಧದ ಆರೋಪಗಳು ಸಾಬೀತಾಗಿರುತ್ತದೆಂದು ವರದಿ ಮಾಡುತ್ತಾ ಇವರ ಮೇಲೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವಂತೆ ಶಿಫಾರಸ್ಸು ಮಾಡಿದೆ.

ವಿಚಾರಣಾ ವರದಿಯ ಪ್ರತಿಯನ್ನು ಒಳಗೊಂಡ ಮೇಲೆ (6)ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ನೋಟಿಸನ್ನು ಆಪಾದಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ಮತ್ತು ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ), ಉಪಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ರವರಿಗೆ ಹೊರಡಿಸಿ ಆ ಬಗ್ಗೆ ಅವರ ಲಿಖಿತ ಪ್ರತಿಪಾದನಾ ಹೇಳಿಕೆ ಏನಾದರೂ ಇದ್ದಲ್ಲಿ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಆಪಾದಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ಮತ್ತು ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ), ಉಪಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ರವರು ಮೇಲೆ (7)ರಲ್ಲಿ ಓದಲಾದ ತಮ್ಮ ಲಿಖಿತ ಪ್ರತಿಪಾದನಾ ಹೇಳಿಕೆಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಒಂದನೇ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ರವರು ತಮ್ಮ ಲಿಖಿತ ಹೇಳಿಕೆಯಲ್ಲಿ ಈ ಕೆಳಕಂಡಂತೆ ಅಹವಾಲನ್ನು ಸಲ್ಲಿಸುತ್ತಾ ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸನ್ನು ತಿರಸ್ಕರಿಸಿ ಆಪಾದನೆಯಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

(1) Enquiry officer has not taken into consideration, the important admissions and statements made by the witnesses in the course of their Cross-Examination made by my counsel.

(2) A perusal of evidence of PW-2 reveals that he has not specifically mentioned the officers who have alleged to have committed irregularities.

(3) The evidence of PW-1 and PW-2 in so far as the first part of the charge are concerned in general terms and nothing has been said against me.

(4) I have not violated any instructions given in the circulars Dated:28.02.1994 and 09.10.1997 respectively.

(5) conduct of the complainant Sri Venkatesh Bhovi, PW-1 has come to the notice of the department and by illegal acts indulged by him has put many of the officers and staff into un-necessary difficulties.

ಎರಡನೇ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ), ಉಪಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ರವರು ತನ್ನ ಲಿಖಿತ ಅಹವಾಲನ್ನು ಈ ಕೆಳಕಂಡಂತೆ ಸಲ್ಲಿಸಿರುತ್ತಾರೆ.

1. The Hon'ble High Court in the case of Sri Venkatesh Gururao KUratti V/s the Syniciate Bank represented by the Chairman and the Managing Director, Manipal and others reported in ILR 2004 page 2240, wherein the Hon'ble High Court has held the manner in which the charges have to be framed and it is well established that if a vague charge is given to a delinquent, it is a fatal defect which vitiates the entire proceedings. It is also relevant to notice that the vagueness in the charge is not excused on the plea that the employee concerned should be deemed to have known the facts correctly. It should not be left to the delinquent official to find out or imagine what the charges against him are and it is for the employer to frame a specific charges with full particulars.
2. The enquiry officer has conducted beyond the scope of the charge memo and has given the findings.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿ ಆಪಾದಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ಮತ್ತು ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ), ಉಪಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇವರ ಮೇಲೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 149 ಇಟಿಎಕ್ಸ್ 2000 (ಭಾ) ಬೆಂಗಳೂರು, ದಿನಾಂಕ:21ನೇ ನವೆಂಬರ್, 2006**

ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳ, ನಿಯಮ 14-ಎ ರೊಂದಿಗೆ ಓದಿಕೊಂಡ ಅದೇ ನಿಯಮಗಳ ನಿಯಮ 11ಎ ಪ್ರಕಾರ ಆಪಾದಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಸಿ.ಎಲ್. ಕಿತ್ತೂರ್, ಉಪನಿರ್ದೇಶಕರು (ಉದ್ಯೋಗ), ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ಮತ್ತು ಶ್ರೀಮತಿ ಕುತೇಜ ಫೈರೋಜ್, ಉದ್ಯೋಗಾಧಿಕಾರಿ (ವೃತ್ತಿ ಮಾರ್ಗದರ್ಶನ), ಉಪಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇವರ ಮೇಲೆ ಈ ಕೂಡಲೇ ಜಾರಿಗೆ ಬರುವಂತೆ ಅದೇ ನಿಯಮಗಳ ನಿಯಮ 8(viii) ರಲ್ಲಿ ನಿರ್ದಿಷ್ಟಪಡಿಸಿರುವ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ).

ಪಿ.ಆರ್. 1661

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಬೆಂಗಳೂರು ಗಾರ್ಡನ್ ಟ್ರಸ್ಟ್‌ನ್ನು "ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ" ಎಂದು ಮರು ನಾಮಕರಣ ಮಾಡಿ ಕರ್ನಾಟಕ ರಾಜ್ಯಾದ್ಯಂತ ಇರುವ ಸರ್ಕಾರಿ ಉದ್ಯಾನವನಗಳು ಮತ್ತು ಪಾರ್ಕ್‌ಗಳನ್ನು ಅದರ ವ್ಯಾಪ್ತಿಗೆ ತರುವ ಬಗ್ಗೆ.

**ಪ್ರಸ್ತಾವನೆ:**

1. ಲಾಲ್‌ಬಾಗ್ ಗ್ಲಾಸ್‌ಹೌಸ್‌ನ ಶತಮಾನತೋತ್ಸವ ಆಚರಣೆ ಸಂದರ್ಭವಾದ 1989ನೇ ವರ್ಷದಲ್ಲಿ ಲಾಲ್‌ಬಾಗ್‌ನ ಅಭಿವೃದ್ಧಿ ಮತ್ತು ನಿರ್ವಹಣೆಗೆ ಅವಶ್ಯಕವಾದ ಆದಾಯವನ್ನು ಕಾಲಾವಧಿಯಲ್ಲಿ ರೂಢಿಸಿಕೊಳ್ಳಲು ಅಗತ್ಯ ಪ್ರಮಾಣದ ಮೂಲಧನವನ್ನು ವೃದ್ಧಿಪಡಿಸುವ ಉದ್ದೇಶದಿಂದ "ನಿಧಿ"ಯನ್ನು ಸ್ಥಾಪಿಸಲಾಯಿತು.

2. ಈ ಹಿನ್ನೆಲೆಯಲ್ಲಿ "ಲಾಲ್‌ಬಾಗ್ ಟ್ರಸ್ಟ್" ನ್ನು ದಿನಾಂಕ:29.03.1990ರಂದು ನೋಂದಾಯಿಸಲಾಯಿತು.

3. ಲಾಲ್‌ಬಾಗ್ ಟ್ರಸ್ಟ್‌ನ ವ್ಯಾಪ್ತಿಯನ್ನು ದಿನಾಂಕ:10.06.1996ರಂದು ಕಬ್ಬನ್‌ಪಾರ್ಕ್ ಮತ್ತು ಎಲ್‌ಆರ್‌ಡಿಇ ಪಾರ್ಕ್ ಪ್ರದೇಶವನ್ನು ಸೇರ್ಪಡಿಸುವ ಮೂಲಕ ವಿಸ್ತರಿಸಲಾಯಿತು ಮತ್ತು ಬೆಂಗಳೂರು ಗಾರ್ಡನ್ ಟ್ರಸ್ಟ್ ಎಂದು ಮರುನಾಮಕರಣ ಮಾಡಲಾಯಿತು. ಉತ್ತಮ ಆಡಳಿತಾತ್ಮಕ ಅಂಶಗಳನ್ನು ಹೊಂದಿ ಟ್ರಸ್ಟ್ ಮೂಲಕ ಅತ್ಯುತ್ತಮ ಚಟುವಟಿಕೆಗಳನ್ನು ಅನುಷ್ಠಾನಗೊಳಿಸುವ ದೃಷ್ಟಿಯಿಂದ ಈ ಕ್ರಮವನ್ನು ಕೈಗೊಳ್ಳಲಾಯಿತು. ಇದರ ಉದ್ದೇಶವೇನೆಂದರೆ ಲಾಲ್‌ಬಾಗ್, ಕಬ್ಬನ್‌ಪಾರ್ಕ್ ಮತ್ತು ಎಲ್‌ಆರ್‌ಡಿಎ ಪಾರ್ಕ್ ಪ್ರದೇಶವನ್ನು ಸಮಪರ್ಕವಾಗಿ ನಿರ್ವಹಿಸುವುದಾಗಿದೆ ಮತ್ತು ಸಾರ್ವಜನಿಕರ ಮಮನರಂಜನೆಗಾಗಿ ಲಭ್ಯವಿರುವಂತೆ ಮಾಡುವುದಾಗಿದೆ. ಪ್ರಸ್ತುತ ಬೆಂಗಳೂರು ಗಾರ್ಡನ್ ಟ್ರಸ್ಟ್‌ನ ಪ್ರಮುಖ ಅಂಶಗಳು ಕೆಳಗಿನಂತಿವೆ:

(ಅ) ಈ ಉದ್ಯಾನವನಗಳ ಅಭಿವೃದ್ಧಿ ಮತ್ತು ನಿರ್ವಹಣೆಯ ಉದ್ದೇಶಗಳನ್ನು ಪೂರೈಸುವ ದೃಷ್ಟಿಯಿಂದ ಟ್ರಸ್ಟ್ ಸಂಪೂರ್ಣ ಸ್ವಾಯುತ್ತತೆ ಪಡೆದಿದೆ ಮತ್ತು ನಿರ್ಧಾರಗಳನ್ನು ಪ್ರಜಾಸತ್ತಾತ್ಮಕವಾಗಿ ಕೈಗೊಳ್ಳಬಹುದಾಗಿದೆ. ಸಂಸ್ಕೃತಿ ಮತ್ತು ಘನತೆ ಕಾಯ್ದುಕೊಳ್ಳುವುದರ ಜೊತೆಗೆ ಹೆಚ್ಚಿನ ಸುಧಾರಣೆಗಳನ್ನು ಕೈಗೊಳ್ಳಲು ಟ್ರಸ್ಟ್ ಸತತವಾಗಿ ಪರಿಶ್ರಮಪಡುತ್ತದೆ. ಇದರ ಅಂತಿಮಗುರಿಯು ಬೆಂಗಳೂರು ನಗರದ ನಾಗರೀಕರಿಗೆ ಲಾಭವಾಗುವಂತಹ ಪರಿಪೂರ್ಣ ಮನರಂಜನೆಯನ್ನು ಒದಗಿಸುವುದಾಗಿದೆ.

(ಆ) ಬೆಂಗಳೂರು ಗಾರ್ಡನ್ ಟ್ರಸ್ಟ್‌ಗೆ ನಿಧಿಯೊಂದನ್ನು ನಿರ್ವಹಿಸುವ ಅವಕಾಶ ಕಲ್ಪಿಸಲಾಗಿದ್ದು, ಕರ್ನಾಟಕ ಸರ್ಕಾರ, ಭಾರತ ಸರ್ಕಾರಗಳಿಂದ ದೊರೆಯುವ ಆರ್ಥಿಕ ಕೊಡುಗೆಗಳು, ರಾಷ್ಟ್ರೀಯ ಬ್ಯಾಂಕುಗಳಿಂದ, ಸಾರ್ವಜನಿಕ ಉದ್ದಿಮೆಗಳಿಂದ ಮತ್ತು ಖಾಸಗಿ ವಲಯದ ಸಂಸ್ಥೆಗಳಿಂದ ನೀಡಲಾಗುವ ದೇಣಿಗೆಗಳು ಹಾಗೂ ಸಾರ್ವಜನಿಕರಿಂದ, ಇತರೇ ಉದ್ದಿಮೆಗಳಿಂದ, ದತ್ತಿಸಂಸ್ಥೆಗಳಿಂದ, ಟ್ರಸ್ಟ್‌ಗಳಿಂದ, ತೋಟಗಾರಿಕೆ ಪ್ರದರ್ಶನಗಳ ಮೂಲಕ ಬರುವ ಆದಾಯದಿಂದ, ಗೇಟ್ ಫೀ, ಇತರೇ ಮೂಲಗಳಿಂದ ಬರುವ ಹಣದಿಂದ ನಿಧಿಯನ್ನು ಸ್ಥಾಪಿಸಲಾಗಿದೆ.

4. ಬೆಂಗಳೂರಿನ ಹೊರಗೆ ಮತ್ತು ರಾಜ್ಯಾದ್ಯಂತ ಇರುವ ಹಲವಾರು ಪಾರ್ಕ್‌ಗಳು ಮತ್ತು ಉದ್ಯಾನವನಗಳ ಮಾಲೀಕತ್ವ, ಅಭಿವೃದ್ಧಿ ಮತ್ತು ನಿರ್ವಹಣೆಯು ತೋಟಗಾರಿಕೆ ಇಲಾಖೆಯ ಹೊಣೆಯಾಗಿರುತ್ತದೆ. ಆದರೆ ದುರದೃಷ್ಟವಶಾತ್, ಇಲಾಖೆಯು ಟ್ರಸ್ಟ್‌ನ ಮಾದರಿಯಲ್ಲಿ ಕಾರ್ಯನಿರ್ವಹಿಸದೇ ಇರುವುದರಿಂದ ಈ ಪಾರ್ಕ್‌ಗಳು ಮತ್ತು ಉದ್ಯಾನವನಗಳ ನಿರ್ವಹಣೆಗೆ ಹಲವಾರು ಮಿತಿಗಳಿರುತ್ತವೆ. ತೋಟಗಾರಿಕೆ ಇಲಾಖೆಯ ವಶದಲ್ಲಿರುವ ಪ್ರಮುಖ ಪಾರ್ಕ್‌ಗಳು ಮತ್ತು ಉದ್ಯಾನವನಗಳೆಂದರೆ ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿರುವ ದೊಡ್ಡ ಆಲದಮರ, ಮುನಿರಾಬಾದ್‌ನಲ್ಲಿರುವ ಪಂಪವನ, ಕೊಡಗಿನ ರಾಜಾಸೀಟ್, ಮಂಗಳೂರಿನ ಕದರಿ ಪಾರ್ಕ್, ಮಂಡ್ಯದಲ್ಲಿರುವ ಕೃಷ್ಣರಾಜಸಾಗರ, ಕಾವೇರಿವನ ಮತ್ತು ಭವ್ಯವನ, ಮೈಸೂರಿನ ಕರ್ಜನ್‌ಪಾರ್ಕ್ ಮತ್ತು ಬೆಳಗಾಂನ ಹ್ಯೂಮ್‌ಪಾರ್ಕ್ ಮತ್ತು ಹಿಡಕಲ್ ಡ್ಯಾಂ, ಬಿಜಾಪುರ ಜಿಲ್ಲೆಯ ಬಸವವನ ಮತ್ತು ಬೀದರ್ ಜಿಲ್ಲೆಯ ಬಸವವನ. ಜೊತೆಗೆ ಗಿರಿಧಾಮಗಳಾದ ನಂದಿ, ಕೆಮ್ಮಣ್ಣುಗುಂಡಿ ಮತ್ತು ಊಟಿಯನ್ನು ಸಹ ತೋಟಗಾರಿಕೆ ಇಲಾಖೆ ನಿರ್ವಹಿಸುತ್ತಲಿದೆ.

5. ಪ್ರಸ್ತುತ ಬೆಂಗಳೂರು ಗಾರ್ಡನ್ ಟ್ರಸ್ಟ್‌ನ ವ್ಯಾಪ್ತಿಯನ್ನು ರಾಜ್ಯಾದ್ಯಂತ ವಿಸ್ತರಿಸಿ, ಸುವರ್ಣ ಕರ್ನಾಟಕ ಉದ್ಯಾನವನಗಳ ನ್ಯಾಸ ಎಂದು ಮರು ನಾಮಕರಣ ಮಾಡಿ ಇನ್ನೂ ಕೆಲವು ಪ್ರಮುಖ ಪಾರ್ಕ್‌ಗಳು ಮತ್ತು ಉದ್ಯಾನವನಗಳನ್ನು ಆಲಮಟ್ಟಿ, ಕೂಡಲಸಂಗಮ, ಜೋಗ್ ಪ್ರದೇಶ, ಇತ್ಯಾದಿ ವ್ಯಾಪ್ತಿಗೆ ತರಲು ತೋಟಗಾರಿಕೆ ಇಲಾಖೆಯು ಉದ್ದೇಶಿಸಿರುತ್ತದೆ.

6. ಪ್ರಸ್ತಾವಿತ ಸುವರ್ಣ ಕರ್ನಾಟಕ ಉದ್ಯಾನವನಗಳ ನ್ಯಾಸದ ಪ್ರಮುಖ ಅಂಶಗಳು ಬೆಂಗಳೂರು ಉದ್ಯಾನವನಗಳ ನ್ಯಾಸದಂತೆಯೇ ಇದ್ದು, ಅವು ಈ ಕೆಳಗಿನಂತಿವೆ.

(ಅ) ಸಂಪನ್ಮೂಲ ಕ್ರೋಢೀಕರಣ ಮತ್ತು ವೃತ್ತಿಪರ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾರ್ವಜನಿಕ-ಖಾಸಗಿ ಸಹಭಾಗಿತ್ವವನ್ನು ಹೊಂದಲು ಅವಕಾಶ ಮಾಡಿಕೊಡುವುದು.

(ಆ) ಬಾಹ್ಯಮೂಲದಿಂದ ಚಟುವಟಿಕೆಗಳನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವುದು.

(ಇ) ಡೊನೇಷನ್‌ಗಳು, ದತ್ತಿ, ಪ್ರಾಯೋಜಕತೆ, ಕೊಡುಗೆಗಳು, ಗೇಟ್ ಫೀ, ಇತ್ಯಾದಿ ಪಡೆಯುವ ಮೂಲಕ ಸ್ವಂತ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಅವಕಾಶ ಮಾಡಿಕೊಡುವುದು.

(ಈ) ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಸ್ಥಳೀಯ ಸಂಸ್ಥೆಗಳು, ಮತ್ತಿತರ ಏಜೆನ್ಸಿಗಳಿಂದ ಹಣಕಾಸು ನೆರವು ಪಡೆಯುವ ಅಗತ್ಯವಿರುವ ಯೋಜನೆಗಳು ಮತ್ತು ಪ್ರಾಜೆಕ್ಟ್‌ಗಳನ್ನು ರೂಪಿಸಲು ಅವಕಾಶ ಮಾಡಿಕೊಡುವುದು.

(ಉ) ಪಾರ್ಕ್‌ಗಳು ಮತ್ತು ಉದ್ಯಾನವನಗಳನ್ನು ಸೂಕ್ತ ರೀತಿಯಲ್ಲಿ ಅಭಿವೃದ್ಧಿಪಡಿಸಲು ಮತ್ತು ನಿರ್ವಹಿಸಲು ನೆರವಾಗುವ ಎಲ್ಲಾ ಚಟುವಟಿಕೆಗಳನ್ನು ಕೈಗೊಳ್ಳಲು ಅವಕಾಶ ಮಾಡಿಕೊಡುವುದು. ಉದಾಹರಣೆಗೆ ಪ್ರವಾಸಿ ಆಕರ್ಷಣೆ ಕೇಂದ್ರಗಳನ್ನಾಗಿ ಮಾಡುವುದು.

(ಊ) ಸುವರ್ಣ ಕರ್ನಾಟಕ ಉದ್ಯಾನವನಗಳ ನ್ಯಾಸಕ್ಕೆ ಅಧಿಕಾರ ನೀಡುವ ಮೂಲಕ ಪ್ರಸ್ತುತ ಸದಸ್ಯರುಗಳ ಜೊತೆ ಸೂಕ್ತತೆಯನ್ನಾಧರಿಸಿ ವಿವಿಧ ತೋಟಗಾರಿಕೆ ಪರಿಣಿತರು, ನಿಗಮಗಳು, ಸಂಸ್ಥೆಗಳು, ಅಧಿಕಾರಿಗಳು, ಸ್ವಾಯತ್ತ ಮತ್ತು ಸರ್ಕಾರಿ ಪ್ರಾಧಿಕಾರಗಳು ಇತ್ಯಾದಿ, ಸೇರ್ಪಡಿಸಿ, ಮಾನ್ಯ ತೋಟಗಾರಿಕೆ ಸಚಿವರನ್ನು ಗೌ. ಅಧ್ಯಕ್ಷರನ್ನಾಗಿ ಮತ್ತು ಪ್ರಧಾನ ಕಾರ್ಯದರ್ಶಿಗಳನ್ನು ಕಾ.ಸಹ-ಅಧ್ಯಕ್ಷರನ್ನಾಗಿ ಮಾಡಿ ತೋಟಗಾರಿಕೆ ಇಲಾಖೆಯು ಕಾಲಾನುಕಾಲಕ್ಕೆ ಅಗತ್ಯವೆನಿಸುವ ಆದೇಶಗಳನ್ನು ಹೊರಡಿಸುವುದು.

(ಋ) ಪಾರ್ಕ್‌ಗಳು ಮತ್ತು ಉದ್ಯಾನವನಗಳ ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿ ಬಳಸಲು ಮೂಲಧನಕ್ಕೆ ಸಂಪನ್ಮೂಲಗಳನ್ನು ಜಮೆ ಮಾಡುವುದು ಮತ್ತು ಈ ನಿಧಿಯನ್ನು ಬಳಸಲು ಅವಕಾಶ ಕಲ್ಪಿಸುವುದು.

7. ಈ ಉದ್ದೇಶಕ್ಕಾಗಿ ಹಾಲಿಯಿರುವ ಬೆಂಗಳೂರು ಗಾರ್ಡನ್ ಟ್ರಸ್ಟನ್ನು ಸುವರ್ಣ ಕರ್ನಾಟಕ ಉದ್ಯಾನವನಗಳ ನ್ಯಾಸ ಎಂದು ಮರುನಾಮಕರಣ ಮಾಡಿ ಇದರ ವ್ಯಾಪ್ತಿಯನ್ನು ರಾಜ್ಯಾದ್ಯಂತ ಇರುವ ಎಲ್ಲಾ ಸರ್ಕಾರಿ ಪಾರ್ಕ್‌ಗಳು ಮತ್ತು ಉದ್ಯಾನವನಗಳಿಗೆ ವಿಸ್ತರಿಸಬೇಕಾಗುವುದು.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 233 ತೋಇವಿ 2006, ಬೆಂಗಳೂರು, ದಿನಾಂಕ:20ನೇ ನವೆಂಬರ್, 2006**

ಮೇಲಿನ ಎಲ್ಲಾ ಅಂಶಗಳನ್ನು ಸಚಿವ ಸಂಪುಟವು ಜಾಗರೂಕತೆಯಿಂದ ವಿವರವಾಗಿ ಪರಿಶೀಲಿಸಿ ಮತ್ತು ಸಕಾರಾತ್ಮಕವಾಗಿ ಪರಿಗಣಿಸಿದೆ ಹಾಗೂ ಅನುಮೋದಿಸಿದೆ.

ಆದುದರಿಂದ, ಬೆಂಗಳೂರು ಗಾರ್ಡನ್ ಟ್ರಸ್ಟ್‌ನ್ನು ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ ಎಂದು ಮರುನಾಮಕರಣ ಮಾಡಲು ಹಾಗೂ ರಾಜ್ಯದಲ್ಲಿರುವ ಎಲ್ಲಾ ಸರ್ಕಾರಿ ಉದ್ಯಾನವನಗಳನ್ನು ಮತ್ತು ಪಾರ್ಕ್‌ಗಳನ್ನು ಈ ಪ್ರತಿಷ್ಠಾನದಡಿ ತರಲು ಆದೇಶಿಸಲಾಗಿದೆ.

ಸುವರ್ಣ ಜಯಂತಿ ಸಂದರ್ಭದಲ್ಲಿ ಕರ್ನಾಟಕ ಜನತೆಗೆ ಇದೊಂದು ಕೊಡುಗೆಯಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 1685

ಸರ್ಕಾರದ ಅಧೀನ ಕಾರ್ಯದರ್ಶಿ (ತೋ),

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Constitution of a 'Vision Group on IT'-Orders-reg.

**Read:** 1) Government Order No.IT 53 TFC 99, Dated:4th December, 1999.

2) Government Order No.ITD 54 MDA 2002 Dated: 10th January 2003 and 7th July, 2003.

3) Letter No. DIT/ ADM/ KP/2004-05/ 255 Dated:24th June 2005 of Director IT and Biotechnology.

4) Government Order No. ITD/ 2/ PRM 2005 Dated:13th September, 2005.

**Preamble:**

The Government vide Order read at (1) above constituted Chief Minister's Task Force on Information Technology for drawing up an action plan for development of the IT Industry and to accelerate the use of IT in Government and in various sectors of the economy. The said Task Force headed by Shri N.R. Narayana Murthy, Chairman, Infosys Technologies Limited had a tenure of two years.

Subsequently, the Government vide Order read at (2) above constituted/ reconstituted a Task Force on Hardware Technology under the chairmanship of the Hon'ble Minister for IT to guide the Government in framing polices to give impetus for the overall growth of Hardware sector.

The Director of IT an BT Department, in his letter read at (3) above has reuested the Government to constitute Vision Group on IT as the term of Chief Minister's IT Task Force is over. He has also recommended that the existing Harware Task Force may be abolished. He has recommended that the Vision Group on IT may consist of 12-15 members with representatives from the software Industry, hardware Industry, BPO, academia, trade bodies and Government.

In Government Order read at (4) above, a Vision Group on IT under the chairmanship of Shri N.R. Narayana Murthy with 17 members was constituted. However, the said Vision Group on IT could not hold meetings as in the meanwhile there was change of Government.

The Government has now re-examined the entire issue and has decided to constitute a 'Vision Group on Information Technology' under the Chairmanship of Shri N.R. Narayana Murthy. The recommendations of the Director, Information Technology and Biotechnology, have been taken into consideration. The consent of Shri N.R. Narayana Murthy and the other members has also been obtained.

Hence the following order.

**Government Order No. ITD 2 PRM 2005, Bangalore, Dated: 25th November, 2006**

In supersession of the existing Chief Minister's Task Force and Hardware Task Force, Government is pleased to constitute a 'Vision Group on Information Technology' consisting of the following members:

1) Shri N.R. Narayana Murthy - Chairman
Chief Mentor, Infosys Technologies Ltd.,
Bangalore.
2) Shri Shankar Annaswamy, - Member
Managing Director, IBM India Ltd.,
Bangalore.
3) Shri S. Devarajan - Member
Managing Director, CISCO System (India) Pvt. Ltd.
Bangalore.
4) Shri Alexius Collete - Member
Chief Executive Officer,
Philips Software Centre Pvt. Ltd., Bangalore.
5) Shri Ravi Venkatesan - Member
Chairman,
Microsoft India Ltd., Bangalore.
6) Shri M. Laxman K. Badiga - Member
Chief Executive, Talent Transformation &
External Relations, Wipro Technologies, Bangalore.
7) Prof. N. Balakrishnan - Member
Associate Director, IISc, Bangalore.
8) Prof. S. Sadagopan - Member
Director, International Institute of Information
Technology-Bangalore.
9) President - Member
NASSCOM, New Delhi.
10) Chairman - Member
India Semi Conductor Association, Bangalore.
11) President - Member
MAIT, Bangalore.

12) Shri B.V. Naidu - Member
Director, STPI-Bangalore.
13) Secretary to Government - Member
Department of IT, BT and S & T, Govt. of Karnataka, Bangalore.
14) Director, - Member Secy.
Department of IT and Biotechnology, Govt. of Karnataka, Bangalore.

The 'Vision Group on Information Technology' shall make specific recommendations to Government on suitable course of action to be taken for implementation of the IT policy and to advise on the following issues:

a. Steps to be taken to move up the value chain in IT;
b. Leadership for Karnataka, both nationally and internationally;
c. Promotion of IT in Secondary cities;
d. To lay roadmap for IT in Karnataka.
e. Broadening the scope of e-governance;
f. Roadmap for e-governance in Karnataka;
g. Extended IT usage in Karnataka;
h. Improving the standard of IT education in Engineering colleges, technical institutions and general education institutions;
i. Organizing Bangalore IT in Trade show and conferences.

By Order and in the name of Governor of Karnataka,
**T.B. RENUKAPRASAD**
Under Secretary to Government,
Information Technology, Biotechnology
and Science & Technology Department.

PR-1706

## ಜಲಸಂಪನ್ಮೂಲ (ಸಣ್ಣ ನೀರಾವರಿ) ಸಚಿವಾಲಯ

**ವಿಷಯ:** ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ರಚಿಸಲಾಗಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಪುನರ್ ರಚಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 51 ಮಸಾವಿ 2003, ದಿನಾಂಕ:06.12.2003.
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 158 ಮಸಾವಿ 2004, ದಿನಾಂಕ:03.01.2005.
3. ಸರ್ಕಾರದ ಆದೇಶ ಸಂಖ್ಯೆ: ಸನೀಇ 110 ಮಸಾವಿ 2005, ದಿನಾಂಕ:18.10.2005.
4. ದಿನಾಂಕ:08.11.2006ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಮುಇಂ/ಸನೀ(ದ) ತಾಮೌನಿಸ/ ತಾಸ-1/2006-07/ 2274.

**ಪ್ರಸ್ತಾವನೆ:**

ಸಣ್ಣ ನೀರಾವರಿಯ ರೂ.30.00 ಲಕ್ಷಗಳಿಗೂ ಹೆಚ್ಚಿನ ಮೌಲ್ಯದ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ರಚಿಸಲಾಗಿದ್ದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ:06.12.2003ರ ಸರ್ಕಾರದ ಆದೇಶದಲ್ಲಿ ಪುನರ್ ರಚಿಸಲಾಗಿದೆ ಹಾಗೂ ಈ ಸಮಿತಿಯ ಕಾಲಾವಧಿ ದಿನಾಂಕ:05.12.2004ಕ್ಕೆ ಅಂತ್ಯಗೊಂಡಿದ್ದರಿಂದ ಸದರಿ ಸಮಿತಿಯನ್ನು ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಮುಂದುವರಿಸಲು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆದೇಶಿಸಲಾಗಿತ್ತು.

ಸಣ್ಣ ನೀರಾವರಿ ಕಾಮಗಾರಿಗಳ 50.00 ಲಕ್ಷಗಳವರೆಗಿನ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ಆಯಾ ವಲಯದ ಸಣ್ಣ ನೀರಾವರಿ ಮುಖ್ಯ ಅಭಿಯಂತರರ ಅಧ್ಯಕ್ಷತೆಯಲ್ಲಿ ತಾಂತ್ರಿಕ ಸಮಿತಿ ರಚಿಸಲು ಮೇಲೆ (3)ರಲ್ಲಿ ಓದಲಾದ ದಿನಾಂಕ:18.10.2005ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ:08.11.2006ರ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಅಭಿಯಂತರರು 50.00 ಲಕ್ಷ ರೂ.ಗಳಿಗೆ ಮೇಲ್ಪಟ್ಟ ಎಲ್ಲಾ ಪ್ರಸ್ತಾವನೆಗಳನ್ನು ಮತ್ತು 250.00 ಲಕ್ಷಗಳಿಗೆ ಮೇಲ್ಪಟ್ಟ ಟೆಂಡರ್ ಹೊತ್ತಿಗೆಯನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಪರಿಶೀಲಿಸಬೇಕಾಗಿರುವುದರಿಂದ ಹಾಗೂ ನಿರ್ಮಾಣ ಹಂತದಲ್ಲಿರುವ ಸಣ್ಣ ನೀರಾವರಿ ಕಾಮಗಾರಿಗಳಲ್ಲಿ ಮುಂದೆ ಉದ್ಭವವಾಗಬಹುದಾದ ಕ್ಲಿಷ್ಟ ಸಮಸ್ಯೆಗಳಿಗೆ ತಾಂತ್ರಿಕ ಸಲಹೆ ಹಾಗೂ ಪರಿಹಾರೋಪಾಯ ಪಡೆಯುವುದು ಅತ್ಯವಶ್ಯಕವಾಗಿದ್ದು ಹಾಲಿ ಅಸ್ತಿತ್ವದಲ್ಲಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ತಾತ್ಕಾಲಿಕವಾಗಿ ಮುಂದುವರಿಸಿದ್ದು ಈ ಸಮಿತಿಯನ್ನು ಸಂಪೂರ್ಣವಾಗಿ ಪುನರ್ ರಚಿಸುವ ಅಗತ್ಯವಿರುವುದಾಗಿ ತಿಳಿಸಿ ಪುನರ್ ರಚನೆಗಾಗಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ರೂ.50.00ಕ್ಕೂ ಮೇಲ್ಪಟ್ಟ ಕಾಮಗಾರಿಗಳ ಅಂದಾಜುಗಳನ್ನು ತಾಂತ್ರಿಕವಾಗಿ ಪರಿಶೀಲಿಸಿ ಸಲಹೆ/ ಸೂಚನೆ ನೀಡುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಚಿಸಲಾಗಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಪುನರ್ ರಚಿಸಿ ಈ ಕೆಳಕಂಡಂತೆ ಸರ್ಕಾರವು ಆದೇಶ ಹೊರಡಿಸಿದೆ.

Minister, Chief Executive Officer & Executive Member of KIADB and a senior Representative of ONGC as Members and to designate the Department of Industries & Commerce as the Nodal Department for the PCPIR matters with a separate Cell in that department, which will deal with all the PCPIR matters.

The Cabinet in its meeting held on 13.9.2006 was pleased to accord approval to the above proposal. Hence the following Order.

**G.O.NO.CI 64 SPI 2006, Bangalore, dated: 18th October 2006**

In the circumstances explained in the Preamble, Government is pleased to constitute the following Empowered Committee in connection with establishment of Petroleum, Chemicals and Petrochemicals Investment Region (PCPIR) near Mangalore.

1. Chief Secretary to Government of Karnataka : Chairman
2. Principal Secretary to Government, Commerce & Industries Department : Member,
3. Principal Secretary to Government, Finance Department : Member,
4. Principal Secretary to Government, Revenue Department : Member,
5. Principal Secretary to Government, Planning & Statistics Department : Member,
6. Principal Secretary to Government, Energy Department : Member,
7. Principal Secretary to Government, Water Resources Department : Member,
8. Principal Secretary to Government, Infrastructure Development Department : Member,
9. Principal Secretary to Government, Public Works Department : Member,
10. Principal Secretary to Government Forest Environment & Ecology Department : Member,
11. Principal Secretary to Chief Minister : Member,
12. Chief Executive Officer & Executive Member, KIADB, Bangalore, : Member,
13. A senior Representative of Oil & Natural Gas Commission (ONGC), Government of India. : Member.

The Director (Technical Cell), Commerce and Industries Department shall be the Convener of the Meeting of the Empowered Committee.

The above committee is empowered to take decisions in respect of the following matters:-

a) Scope and extent of the PCPIR
b) Developing the Master Plan
c) Engaging Consultants, Developers and Co-Developers and incurring expenditure on the same; Taking decisions on providing infrastructure linkages (power, water, roads and sewerage / effluent treatment etc.
d) Directing the concerned departments of the State Government to improve the infrastructure and in issuing necessary clearances
e) Any other matter relating to establishment and development of the PCPIR.

By Order and in the Name of the Governor of Karnataka,

**B.V.Kumaraswamy**

Under Secretary to Government (ID)

Commerce & Industries Department.

P.R. 1565

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ರಾಜಗೋಪಾಲ್, ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು, ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ: 17–4–2006ರ ಮಂಡ್ಯ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಇಎಸ್‌ಟಿ(2)70/ 2005–06.

**ಪ್ರಸ್ತಾವನೆ:–**

ಶ್ರೀ ರಾಜಗೋಪಾಲ್, ನಿವೃತ್ತ ತಹಶೀಲ್ದಾರರು, ಇವರು ಹಿಂದೆ ಪಾಂಡವಪುರ ತಾಲ್ಲೂಕಿನ ತಹಶೀಲ್ದಾರರಾಗಿದ್ದಾಗ, ಚಿನಕುರುಳಿ ಹೋಬಳಿ ಡಿಂಕಾಕಾವಲ್ ಗ್ರಾಮದ ಸರ್ವೆ ನಂ. 19ರ 4–01 ಗುಂಟೆ ಸರ್ಕಾರಿ ಕೆರೆ ಜಮೀನಿನ ಒತ್ತುವರಿಯನ್ನು ತೆರವುಗೊಳಿಸಲು ಸಾರ್ವಜನಿಕ ಆಸ್ತಿಯನ್ನು ಸಾರ್ವಜನಿಕ ಉದ್ದೇಶಕ್ಕೆ ರಕ್ಷಿಸುವ ಬಗ್ಗೆ ಕರ್ತವ್ಯ ಲೋಪವೆಸಗಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುತ್ತದೆ.

### ಸರ್ಕಾರದ ಆದೇಶ ಸಂಖ್ಯೆ: ಕಂ.ಇ 40 ಎಡಿಇ 2005, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2006

ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ, ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಾಜಗೋಪಾಲ್, ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು ಹಾಲಿ ನಿವೃತ್ತರು ಇವರ ವಿರುದ್ಧ, ಮೇಲೆ ಹೇಳಿದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 & 11ಎ ರಡಿಯಲ್ಲಿ ನಿಗಧಿಪಡಿಸಿರುವ ಕಾರ್ಯಭಾರವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1498

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 2002ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು (ಕರ್ನಾಟಕ ಸಿವಿಲ್ ಸೇವೆ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವಿಶೇಷ ನೇಮಕಾತಿ) ನಿಯಮಗಳು 1985 ರನ್ವಯ ನೇಮಕಗೊಂಡ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಅಧಿಸೂಚನೆ ಸಂ.ಕಂಇ 11 ಎಎಸ್‌ಜಿ 01,ದಿನಾಂಕ:08–07– 2002
2 ಸರ್ಕಾರಿ ಆದೇಶ ಸಂ.ಕಂಇ 225 ಎಎಸ್‌ಡಿ 2005, ದಿ:20–12–2005.
3 ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಪತ್ರ ಸಂ.ಇಎಸ್‌ಟಿ(1),ಸಿಆರ್32/02–03 ದಿನಾಂಕ: 23.11.2004
4 ಕೋಲಾರ ಜಿಲ್ಲಾಧಿಕಾರಿಗಳ ಪತ್ರ ಸಂ.ಸಿಬ್ಬಂದಿ(1)ಸಿಆರ್:321:05–06, ದಿನಾಂಕ:18–1–2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ(1) ರಲ್ಲಿ ಓದಲಾದ ದಿನಾಂಕ:08–07–2002 ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಸಿವಿಲ್ ಸೇವೆ (ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡ ವಿಶೇಷ ನೇಮಕಾತಿ) ನಿಯಮಗಳು 1985 ರನ್ವಯ 05 ಜನ ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಪರಿವೀಕ್ಷಣೆಯ ಮೇಲೆನೇಮಿಸಿಕೊಂಡು ಎರಡು ವರ್ಷಗಳ ಕಾಲ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ನಿಯೋಜಿಸಲಾಗಿತ್ತು.ಸದರಿ ಅಧಿಸೂಚನೆಯಲ್ಲಿ ಅವರುಗಳು ಎರಡು ವರ್ಷಗಳು ಪರಿವೀಕ್ಷಣೆಯ ಮೇಲೆ ಇರುತ್ತಾರೆಂದು ಮತ್ತು ಅವರುಗಳು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ಕೆಲವು ನಿಗಧಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾದ ದಿನಾಂಕ:20–12–2005 ರ ಆದೇಶದಲ್ಲಿ 05 ಜನ ಪರಿವೀಕ್ಷಣಾ ತಹಶೀಲ್ದಾರರುಗಳ ಪೈಕಿ ಶ್ರೀ ಡಿ.ಷಣ್ಮುಖ, ಶ್ರೀ ಸಿ.ಎನ್.ಶ್ರೀಧರ್, ಶ್ರೀಮತಿ ಲಕ್ಷ್ಮಮ್ಮ ಹಾಗೂ ಶ್ರೀ ಸತೀಶ್‌ಕುಮಾರ್‌ರ ಪರಿವೀಕ್ಷಣೆ ಅವಧಿಯನ್ನು ಘೋಷಿಸಲಾಗಿದೆ. ಶ್ರೀ ಮಂಜುನಾಥ್.ಎ.ಎಲ್., ರವರು ಕನ್ನಡ ಪರೀಕ್ಷೆ ಪಾಸು ಮಾಡಿರುವ ಬಗ್ಗೆ ಮಾಹಿತಿ ಲಭ್ಯವಿಲ್ಲದೇ ಇದ್ದುದರಿಂದ ಅವರ ಪರಿವೀಕ್ಷಣಾವಧಿಯನ್ನು ಸದರಿ ಆದೇಶದಲ್ಲಿ ಘೋಷಿಸಿರುವುದಿಲ್ಲ.

ಮೇಲೆ ಕ್ರಮ ಸಂಖ್ಯೆ:(4) ರಲ್ಲಿ ಓದಲಾಗಿರುವ ದಿನಾಂಕ:18.01.2006ರ ಪತ್ರದಲ್ಲಿ ಕೋಲಾರ ಜಿಲ್ಲಾಧಿಕಾರಿಗಳು ಶ್ರೀ ಎ.ಎಲ್. ಮಂಜುನಾಥ್, ಇವರು ಎಸ್.ಎಸ್.ಎಲ್.ಸಿ. ಪಟ್ಟಿಯ ದೃಢೀಕೃತ ಜೆರಾಕ್ಸ್ ಪ್ರತಿ ಕಳಿಸಿ ಸದರಿಯವರು ಕನ್ನಡ ಭಾಷಾ ವಿನಾಯ್ತಿ ಬಗ್ಗೆ ದಾಖಲೆ ಒದಗಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾಗಿರುವ ದಿನಂಕ:23.11.2004ರ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಸದರಿ ಪರಿವೀಕ್ಷಣಾ ತಹಶೀಲ್ದಾರರು ತೃಪ್ತಿಕರವಾಗಿ ಪರಿವೀಕ್ಷಣಾವಧಿಯಲ್ಲಿ ಕಾರ್ಯನಿರ್ವಹಿಸಿರುತ್ತಾರೆಂದು ಶಿಫಾರಸ್ಸು ಮಾಡಿರುವುದರಿಂದ ಹಾಗೂ ಶ್ರೀ ಎ.ಎಲ್. ಮಂಜುನಾಥ್, ರವರು ಎಲ್ಲಾ ನಿಗದಿತ ಇಲಾಖಾ ಮಾಡಿರುವುದರಿಂದ ಹಾಗೂ ಶ್ರೀ ಎ.ಎಲ್. ಮಂಜುನಾಥ್, ರವರು ಎಲ್ಲಾ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರನ್ವಯ ಈ ಪರಿವೀಕ್ಷಣಾ ತಹಶೀಲ್ದಾರರು ತೃಪ್ತಿಕರವಾಗಿ ಪರಿವೀಕ್ಷಣಾವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರಿ ಆದೇಶ ಸಂಖ್ಯೆ:ಕಂಇ 225 ಎಎಸ್‌ಡಿ 2005, ಬೆಂಗಳೂರು, ದಿನಾಂಕ:26ನೇ ಸೆಪ್ಟೆಂಬರ್ 2006.

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ವರದಿಯನ್ನು ಅನುಸರಿಸಿ, ಈ ಕೆಳಕಂಡ ಪರಿವೀಕ್ಷಣಾ ತಹಶೀಲ್ದಾರರು, ಕರ್ನಾಟಕ ಸಿವಿಲ್ ಸೇವೆ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವಿಶೇಷ ನೇಮಕಾತಿ) ನಿಯಮಗಳು, 1985 ರಡಿ ನೇಮಕಗೊಂಡ (2002 ನೇ ತಂಡ) ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

| ಪರಿವೀಕ್ಷಣಾ ತಹಶೀಲ್ದಾರ್‌ರ ಹೆಸರು | ಪರಿವೀಕ್ಷಣಾವಧಿ ಪ್ರಾರಂಭವಾದ ದಿನಾಂಕ: | ಪರಿವೀಕ್ಷಣಾವಧಿ ಮುಕ್ತಾಯವಾದ ದಿನಾಂಕ: |
|---|---|---|
| ಶ್ರೀ ಎ.ಎಲ್.ಮಂಜುನಾಥ್ | 12-07-2002 | 11-07-2004 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಶ್ರೀಮತಿ ಚಂದ್ರಶೇಖರ**

ಪಿ.ಆರ್. 1456

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳ-3)

**ವಿಷಯ:** ಶ್ರೀ ಎಂ.ಪಿ.ಸೋಮಯ್ಯ, ಹಿಂದಿನ ತಹಶೀಲ್ದಾರ್, ಹೆಚ್.ಡಿ.ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ, ಹಾಲಿ ವಿಶೇಷ ತಹಶೀಲ್ದಾರ್, ಹನೂರು, ಕೊಳ್ಳೇಗಾಲ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ- ಆರೋಪಿತರನ್ನು ಆರೋಪ ಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:** 1 ದಿನಾಂಕ: 7.9.2002ರ ಸರ್ಕಾರಿ ಆದೇಶ ಸಂಖ್ಯೆ:ಕಂ.ಇ. 54 ಎ.ಡಿ.ಇ 2001,

2 ವಿಚಾರಣಾಧಿಕಾರಿ ವರದಿ ( ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ಸಿಸಿಎ (2)ಸಿಆರ್ 129/05-06, ದಿ: 13-1-2006.)

**ಪ್ರಸ್ತಾವನೆ:-**

ಶ್ರೀ ಎಂ.ಪಿ. ಸೋಮಯ್ಯ, ಇವರು ಹೆಗ್ಗಡ ದೇವನಕೋಟೆ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಸದರಿ ತಾಲ್ಲೂಕಿನ ಆರ್.ಟಿ.ಸಿ ಗಣಕೀಕರಣ ಸಂಬಂಧವಾಗಿ ಸಮರ್ಪಕವಾಗಿ ಮೇಲ್ವಿಚಾರಣೆ ಮಾಡದೆ ಸರ್ಕಾರಕ್ಕೆ 2000-01ನೇ ಸಾಲಿನ ಆರ್.ಟಿ.ಸಿ.ಯ ಯಾವುದೇ ಅಪ್‌ಡೇಶನ್ (Updation) ಕಾರ್ಯ ಪ್ರಾರಂಭವಾಗಿಲ್ಲವೆಂದು ಉಪ ವಿಭಾಗಾಧಿಕಾರಿಗಳ ಕಾರ್ಯಾಲಯಕ್ಕೆ ಮಾಹಿತಿ ನೀಡಿ ಇದರಂತೆ ದಿ:20.6.2001 ರಂದು ಅರೆ ಸರ್ಕಾರಿ ಪತ್ರ ಸಂಖ್ಯೆ: ಆರ್.ಟಿ.ಸಿ./ಗಣಕ/2/2001-02ರ ಪ್ರಕಾರ ಸರ್ಕಾರದ ಕಂದಾಯ ಇಲಾಖೆಯ ಅಪರ ಕಾರ್ಯದರ್ಶಿಗಳಿಗೆ ವರದಿ ಸಲ್ಲಿಸುವಂತೆ ಮಾಡಿ, ತದನಮತರ ದಿನಾಂಕ: 23.6.2001 ರಂದು 2001-02ನೇ ಸಾಲಿನ ಆರ್.ಟಿ.ಸಿ. ಅಪ್‌ಡೇಶನ್ ಬಗ್ಗೆ 56 ಗ್ರಾಮಲೆಕ್ಕಿಗ ವೃತ್ತದ ಪೈಕಿ 29 ಗ್ರಾಮಲೆಕ್ಕಿಗ ವೃತ್ತದ ಆರ್.ಟಿ.ಸಿ. ಕೆಲಸ ಪೂರ್ಣಗೊಂಡಿದೆಯೆಂದು ದಿನಾಂಕ: 18.6.2001 ರಂದು ಸರ್ಕಾರಕ್ಕೆ ವಿಭಿನ್ನ ಮಾಹಿತಿಯೊಂದಿಗೆ ತಪ್ಪು ಮಾಹಿತಿ ನೀಡಿ ಹುದ್ದೆಗೆ ತರವಲ್ಲದ ರೀತಿ ವರ್ತಿಸಿರುತ್ತಾರೆಂದು ಸದರಿ ತಾಲ್ಲೂಕಿನ ಪಡುವಕೋಟೆ ಕಾವಲಿನ ಸರ್ವೆ ನಂ. 53/231, 53/232ರ ಜಮೀನಿನ ಸಂಬಂಧವಾಗಿ ಭೂ ವಿವಾದದ ಕಡತವನ್ನು ಕೂಲಂಕಷವಾಗಿ ಪರಿಶೀಲಿಸಿ ಕಾನೂನು ರೀತಿ ಕ್ರಮ ಕೈಗೊಳ್ಳಲು ವಿಫಲರಾಗಿರುತ್ತಾರೆಂದು, ಸರ್ಕಾರದ ಬೇಡಿಕೆ ಬಾಕಿ ಪ್ರಕರಣಗಳ ಪೈಕಿ ಭೂ ಕಂದಾಯದ ಬಾಕಿಯನ್ನು ದಿನಾಂಕ: 30.6.2001ರ ಒಳಗೆ ಸಂಪೂರ್ಣವಾಗಿ ವಸೂಲಿ ಬೇಕೆಂದು ಸ್ಪಷ್ಟ ನಿರ್ದೇಶನವಿದ್ದರೂ ಸಹ ಸದರಿ ಸಾಲಿನ ಅಂತ್ಯದಲ್ಲಿ ರೂ.1,72,853.00 ಮೊಬಲಗನ್ನು ಭೂ ಕಂದಾಯದ ಬೇಡಿಕೆ ಬಾಬ್ತು ಉಳಿಸಿಕೊಂಡು ಸರ್ಕಾರಿ ಕೆಲಸದಲ್ಲಿ ನಿರ್ಲಕ್ಷ್ಯ ತೋರಿ ಕರ್ತವ್ಯಲೋಪ ಎಸಗಿರುತ್ತಾರೆಂದು ಹಾಗೂ ಸದರಿ ತಾಲ್ಲೂಕಿನಲ್ಲಿ ಸರ್ಕಾರದ ಪ್ರತಿನಿಧಿಯಾಗಿ ತಾಲ್ಲೂಕಿನ ಜನರ ಸಮಸ್ಯೆಗಳಿಗೆ ಸ್ಪಂದಿಸಿ ಕೆಲಸ ಮಾಡಬೇಕಾಗಿದ್ದರೂ ಸಹ ಕಾನೂನಿನ ಚೌಕಟ್ಟಿನಲ್ಲಿ ಜನರ ಬೇಡಿಕೆ ಈಡೇರಿಸಲಾಗದಿದ್ದರೆ, ಈ ಬಗ್ಗೆ ಜನ ಸಮಾನ್ಯರಿಗೆ ಅರ್ಥೈಸಿ ಹೇಳುವಂತಹ ಸಾರ್ವಜನಿಕ ಸಂಪರ್ಕವನ್ನು ಸರಿಯಾದ ರೀತಿಯಲ್ಲಿ ಇಟ್ಟುಕೊಳ್ಳದೇ ಸಾರ್ವಜನಿಕ ಕೆಲಸ ಕಾರ್ಯಗಳಲ್ಲಿ ಮೇಲಧಿಕಾರಿಗಳ ಆದೇಶವನ್ನು ಅನುಷ್ಠಾನಕ್ಕೆ ತರುವ ದಿಸೆಯಲ್ಲಿ ಕಿಂಚಿತ್ತು ಆಸಕ್ತಿ ವಹಿಸದೇ ಹುದ್ದೆಗೆ ತರವಲ್ಲದ ರೀತಿಯಲ್ಲಿ ವರ್ತಿಸಿ 1966ರ ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಾವಳಿಗಳ ನಿಯಮ 3ರ ಎಲ್ಲಾ ಉಪಬಂಧಗಳನ್ನು ಉಲ್ಲಂಘಿಸಿರುವ ಆರೋಪದ ಬಗ್ಗೆ ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 7.9.2002ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ. ಸಿ.ಕೆ. ಬಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಯನ್ನುಜರುಗಿಸಿದ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಬೆಂಗಳೂರು ಜಿಲ್ಲಾಧಿಕಾರಿಗಳ ಮೂಲಕ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 13.1.2006ರ ಪತ್ರದ ಮೂಲಕ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಶ್ರೀ ಎಂ.ಪಿ. ಸೋಮಯ್ಯ ಇವರ ವಿರುದ್ಧದ ಆರೋಪವು ಸಾಬೀತಾಗಿರುವುದಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಸದರಿ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಿ, ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸದರಿ ಅಧಿಕಾರಿಯ ವಿರುದ್ಧದ ಆಪಾದನೆಗಳು ಸಾಬೀತಾಗದಿರುವುದರಿಂದ ಅವರನ್ನು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಪದಿಂದ ಮುಕ್ತಗೊಳಿಸಲು ನಿರ್ಧರಿಸಿರುವುದರಿಂದ ಈ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ. 54 ಎಡಿಇ 2001, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಎಂ.ಪಿ.ಸೋಮಯ್ಯ, ಹಿಂದಿನ ತಹಶೀಲ್ದಾರ್, ಹೆಚ್.ಡಿ.ಕೋಟೆ ತಾಲ್ಲೂಕು, ಪ್ರಸ್ತುತ ವಿಶೇಷ ತಹಶೀಲ್ದಾರ್, ಹನೂರು, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಇವರ ವಿರುದ್ಧ ದಿನಾಂಕ: 7.9.2002ರ ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 54 ಎಡಿಇ 2001 ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿ ಆದೇಶಿಸಿದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ ಜರುಗಿಸದಿದ್ದಲ್ಲಿ, ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1425

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಕಾರ್ಕಳ ತಾಲ್ಲೂಕು ಹೆಬ್ರಿ ಗ್ರಾಮದ ಸ.ನಂ.ಬ್ರ:214:1 ರಲ್ಲಿ ರಿಸರ್ವ ಫಾರೆಸ್ಟ್ ಜಮೀನನ್ನು ಅಕ್ರಮವಾಗಿ ಮಂಜೂರು ಮಾಡಿದ ಅಧಿಕಾರಿ/ಸಿಬ್ಬಂದಿ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**
1 ಉಡುಪಿ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಇಎಸ್‌ಟಿ (1) ಸಿಆರ್:4:2004–05: ದಿ: 26.08.2005.
2 ಶ್ರೀ ಶಾಂತಾರಾಂ ಚಿಪಳೂಣ್‌ಕರ್ ಹಿಂದಿನ ತಹಶೀಲ್ದಾರ್ ಮತ್ತಿತರಿಗೆ ನೀಡಿರುವ ಕಾರಣ ಕೇಳುವ ನೋಟೀಸ್ ಕಂ.ಇ:7 ಎಡಿಇ 2005, ದಿ:20.12.2005
3 ಅಧಿಕಾರಿ/ನೌಕರರು ನೀಡಿರುವ ಲಿಖಿತ ಹೇಳಿಕೆ
ಅ) ಶ್ರೀ ಶಾಂತಾರಾಮ್, ಚಿಪಳೂಣ್‌ಕರ್, ತಹಶೀಲ್ದಾರ್‌ರು, ದಿ:11.1.2006
ಆ) ಶ್ರೀ ಸದಾಶಿವ ಕಲ್ಯಾಣಪುರ, ಉಪತಹಶೀಲ್ದಾರರು, ದಿ:10.02.2006.
ಇ) ಶ್ರೀ ಕೆ.ಭಾಸ್ಕರ್, ಪ್ರ.ದ.ಸ., ದಿ:10.02.2006.

**ಪ್ರಸ್ತಾವನೆ:**

ಕಾರ್ಕಳ ತಾಲ್ಲೂಕು ಹೆಬ್ರಿ ಗ್ರಾಮದ ಸ.ನಂಬ್ರ:214:1 ರಲ್ಲಿನ ಅರಣ್ಯ ಜಮೀನು ಅಕ್ರಮ ಸಕ್ರಮದಡಿ ಕಾನೂನು ಬಾಹಿರವಾಗಿ ಮಂಜೂರು ಮಾಡಿರುವ ಸಂಬಂಧ ಹಿಂದಿನ ತಹಶೀಲ್ದಾರರಾದ ಶ್ರೀ ಶಾಂತಾರಾಮ್ ಚಿಪಳೂಣ್‌ಕರ್ ಮತ್ತಿತರ ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಇವರುಗಳ ವಿರುದ್ಧ ಕರಡು ದೋಷಾರೋಪಗಳನ್ನು ತಯಾರಿಸಿ ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ದಿ:26.08.2005ರ ಪತ್ರದಲ್ಲಿ ಉಡುಪಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13ರಡಿಯಲ್ಲಿ ದೋಷಾರೋಪಗಳನ್ನು (ಅನುಬಂಧ 1 ರಿಂದ 4ರ ವರೆಗೆ) ಆರೋಪಿತ ಅಧಿಕಾರಿ: ನೌಕರರುಗಳಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 20–12–2005ರ ಕಾರಣ ಕೇಳುವ ನೋಟೀಸು ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು.

ಆಪಾದಿತ ಅಧಿಕಾರಿ: ನೌಕರರಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಹೇಳಲಾಗಿರುವ ಅಧಿಕಾರಿ:ನೌಕರರು ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಲಾಗುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಅರ್.ಡಿ 44: ಎಡಿಇ 2004, ಬೆಂಗಳೂರು, ದಿ: 6ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಅವರುಗಳ ವಿರುದ್ಧದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಬಿ.ಶಂಕರನಾರಾಯಣ ಭಟ್, ಕೋಂ: ಬಿ.ನಾರಾಯಣ ಭಟ್, ಬನೆ ಹೌಸ್, ಕೈರಂಗಲ ವಿಲೇಜ್ ಮತ್ತು ಪೋಸ್ಟ್, ದಕ್ಷಿಣ ಕನ್ನಡ ಜಿಲ್ಲೆ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಅ) ಶ್ರೀ ಶಾಂತಾರಾಮ್ ಚಿಪಳೂಣ್‌ಕರ್, ತಹಶೀಲ್ದಾರರು,
ಆ) ಶ್ರೀ ಸದಾಶಿವ ಕಲ್ಯಾಣಪುರ, ಉಪ ತಹಶೀಲ್ದಾರರು,
ಇ) ಶ್ರೀ ಕೆ.ಭಾಸ್ಕರ್, ಪ್ರ.ದ.ಸ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಉಡುಪಿ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಉಡುಪಿ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣಾಧಿಕಾರಿಗಳಿಗೆ ರೂ.6,000–00 (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ.1,000–00 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆ (ಕನ್ವೆಯನ್ಸ್ ಅಲೋಯನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಉಡುಪಿ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1472 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಆರ್.ಎ. ಪಾಟೀಲ್, ಹಿಂದಿನ ತಹಶೀಲ್ದಾರ್, ಅಥಣಿ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಬಾದಾಮಿ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ 39 ಎಡಿಇ 95, ದಿನಾಂಕ: 5–8–2005.

(2) ಬೆಳಗಾವಿ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಕಂಶಾ/ಸಿಬ್ಬಂದಿ 5 ವಿವ/05–06, ದಿನಾಂಕ: 25–8–2005 ಮತ್ತು 29–9–2005.

(3) ದಿನಾಂಕ: 22–12–2005ರ ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆರ್.ಡಿ 39 ಎಡಿಇ 2005.

(4) ಶ್ರೀ ಆರ್.ಎ. ಪಾಟೀಲ್, ತಹಶೀಲ್ದಾರ್‌ರ ದಿನಾಂಕ: 7–1–2006ರ ಹೇಳಿಕೆ.

(5) ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ 39 ಎ.ಡಿ.ಇ. 2005, ದಿನಾಂಕ:8–5–2006.

**ಪ್ರಸ್ತಾವನೆ:**

ಶ್ರೀ ಆರ್.ಎ. ಪಾಟೀಲ್, ತಹಶೀಲ್ದಾರ್, ಬಾದಾಮಿ ತಾಲ್ಲೂಕು ಇವರು ಈ ಹಿಂದೆ ತಹಶೀಲ್ದಾರ್, ಅಥಣಿ ತಾಲ್ಲೂಕು ಅಂತ ಕಾರ್ಯ ನಿರ್ವಹಿಸುತ್ತಿದ್ದಾಗ ಅಥಣಿ ತಾಲ್ಲೂಕಿನಲ್ಲಿ ಸಂಬಂಧಿಸಿದ ಪ್ರವಾಹ ಪೀಡಿತ ಪ್ರದೇಶಗಳಿಗೆ ಭೇಟಿ ನೀಡಲು ವಿಫಲವಾಗಿರುವುದು, ಕಛೇರಿ ಸಿಬ್ಬಂದಿಯಾದ ಕಂದಾಯ ನಿರೀಕ್ಷಕರು ಗ್ರಾಮಲೆಕ್ಕಿಗರನ್ನು ತಾಲ್ಲೂಕಿನ ಸತ್ತಿ, ಜುಂಬರವಾಡ, ಶೇಗುಣಗೆ, ಮಳವಾಡ, ಕುಸನಾಳ ಮುಂತಾದ ಗ್ರಾಮಗಳ ಪ್ರವಾಹ ಪರಿಸ್ಥಿತಿ ಅರಿಯಲು ಹಾಗು ಅವಶ್ಯಕ ಪರಿಹಾರ ಒದಗಿಸಲು ಅವರುಗಳ ಸೇವೆಯನ್ನು ಪಡೆಯಲು ವಿಫಲರಾಗಿರುವುದು, ಜಿಲ್ಲಾಧಿಕಾರಿಗಳು ಬೆಳಗಾವಿ ಇವರು ಅಥಣಿಗೆ ಭೇಟಿ ನೀಡಿದಾಗ ಪತ್ರಕರ್ತರು ಹಾಗೂ ದೂರು ಸಲ್ಲಿಸಲು ಬಂದ ಸಾರ್ವಜನಿಕರ ಸಮಕ್ಷಮದಲ್ಲಿ ಪ್ರವಾಹ ಪೀಡಿತ ಜನರು ಹಾಗೂ ಸಾಮಗ್ರಿಗಳನ್ನು ಸಾಗಿಸಲು ಅಗತ್ಯವಾದ ವಾಹನಗಳನ್ನು ಕ್ರೋಢೀಕರಿಸಲು ಸ್ಪಷ್ಟವಾದ ನಿರ್ದೇಶನ ನೀಡಿದ್ದರೂ ಸಹ ಅವುಗಳನ್ನು ಕಾರ್ಯಗತಗೊಳಿಸುವಲ್ಲಿ ವಿಫಲರಾಗಿರುವುದು ಮತ್ತು ಪ್ರವಾಹ ಪೀಡಿತ ಸಂಕ್ರಟ್ಟಿ ಗ್ರಾಮದಲ್ಲಿ ಒಂದು ಗೋಶಾಲೆಯನ್ನು ತೆರೆದು ಸಾರ್ವಜನಿಕರು ಜಾನುವಾರುಗಳಿಗೆ ದಾನವಾಗಿ ನೀಡಿದ ಮೇವು ವಿತರಿಸುವ ಕಾರ್ಯವನ್ನು ಕೈಗೊಳ್ಳುವಂತೆ ಪಶುಸಂಗೋಪನಾ ಇಲಾಖೆಯ ಉಪನಿರ್ದೇಶಕರು ಅಥಣಿ ಇವರು ವಿನಂತಿಸಿದ್ದರೂ ಗೋಶಾಲೆಗೆ ಭೇಟಿ ನೀಡದಿರುವುದು, ಇದರಿಂದ ಪ್ರವಾಹ ಪೀಡಿತ ಕ್ಲಿಷ್ಟ ಸನ್ನಿವೇಶದಲ್ಲಿ ಕಾರ್ಯನಿರ್ವಾಹಕ ಕೆಲಸಗಳನ್ನು (Executive Work) ಜವಾಬ್ದಾರಿಯುತವಾಗಿ ನಿರ್ವಹಿಸಲು ಅಸಮರ್ಥರಾಗಿರುವ ಕರ್ತವ್ಯ ಲೋಪದ ಬಗ್ಗೆ ಬೆಳಗಾವಿ ಜಿಲ್ಲಾಧಿಕಾರಿಗಳ ವರದಿಯನ್ವಯ ಸದರಿಯವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ ಸದರಿಯವರನ್ನು ಮೇಲೆ ಓದಲಾದ ಕ್ರ.ಸಂ (1)ರ ದಿನಾಂಕ: 5–8–2005ರ ಆದೇಶದಲ್ಲಿ ಅಮಾನತ್ತುಗೊಳಿಸಲಾಗಿತ್ತು. ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ (2)ರಲ್ಲಿ ಓದಲಾದ ದಿನಾಂಕ: 29–9–2005ರ ಪತ್ರದಲ್ಲಿ ಬೆಳಗಾವಿ ಜಿಲ್ಲಾಧಿಕಾರಿಗಳು ದೋಷಾರೋಪಣಾ ಪಟ್ಟಿಯನ್ನು ಸರ್ಕಾರಕ್ಕೆ ಕಳೂಹಿಸಿದ್ದರು.

ಶ್ರೀ ಆರ್.ಎ. ಪಾಟೀಲ್‌ರವರ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ–1 ರಿಂದ 4 ರವರೆಗೆ) ಮೇಲೆ ಓದಲಾದ ಕ್ರ.ಸಂ. 3 ರಲ್ಲಿ ಓದಲಾದ ದಿನಾಂಕ: 22–12–2005ರ ಕಾರಣ ಕೇಳುವ ನೋಟೀಸಿನೊಂದಿಗೆ ಅವರಿಗೆ ಜಾರಿಗೊಳಿಸಿ ಆ ಬಗ್ಗೆ ಅವರು ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಸದರಿಯವರು ಮೇಲೆ ಕ್ರ.ಸಂ (4)ರಂತೆ ದಿನಾಂಕ: 7–1–2006ರಂದು ಸಲ್ಲಿಸಿರುವ ಲಿಖಿತ ಉತ್ತರದಲ್ಲಿ ಅವರ ಮೇಲಿನ ಆರೋಪಗಳನ್ನು ನಿರಾಕರಿಸಿ ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ. ಶ್ರೀ ಆರ್.ಎ. ಪಾಟೀಲ್‌ರವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ ಮೇಲೆ ಕ್ರ.ಸಂ (5)ರಲ್ಲಿ ಓದಲಾದ ದಿನಾಂಕ: 8–5–2006ರ ಆದೇಶದಲ್ಲಿ ಸದರಿಯವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಲಾಗಿತ್ತು.

ಶ್ರೀ ಆರ್.ಎ.ಪಾಟೀಲ್‌ರವರು ಸಲ್ಲಿಸಿದ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ ಒಪ್ಪಲು ಸಮರ್ಪಕ ಅಂಶಗಳಿರುವುದಿಲ್ಲ ಮತ್ತು ಅವರು ಆರೋಪಿತ ಕರ್ತವ್ಯ ಲೋಪಗಳನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಆದ್ದರಿಂದ ಅವರ ವಿರುದ್ಧ ಹೊರಿಸಲಾದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ. 39 ಎಡಿಇ 2005, ದಿನಾಂಕ:17ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ಶ್ರೀ ಆರ್.ಎ. ಪಾಟೀಲ್ ಹಿಂದಿನ ತಹಶೀಲ್ದಾರ್, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಹಾಲಿ ತಹಶೀಲ್ದಾರ್ ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಶ್ರೀ ಎಸ್.ಎನ್.ಧಾರವಾಡಕರ್ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ನಂ.1 ಸೆಕ್ಟರ್ 33 ಒಲ್ಡ್‌ಡಿಸಿ ರೆಸಿಡೆನ್ಸಿ ನವನಗರ ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವ.ನಿ ಮತ್ತು ಮೇ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಳಗಾವಿ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಳಗಾವಿ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ವಿಚಾರಣೆ ನಡೆಸುವುದು ಹಾಗೂ ಸಂಬಂಧಿಸಿದ ಕಚೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂ: ಸಿಆಸುಇ 16 ಸೇವಿಇ 2005, ದಿನಾಂಕ: 23.8.2005ರನ್ವಯ ವಿಚಾರಣಾಧಿಕಾರಿಗಳಿಗೆ ರೂ.6000/– (ಆರು ಸಾವಿರ ರೂಗಳೂ ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 4–3–2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ರನ್ವಯ ರೂ.1000/– (ಒಂದು ಸಾವಿರ ರೂಗಳೂ ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಳಗಾವಿ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11 ಮತ್ತು 11–ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1513

**ಆರ್. ಶ್ರೀಮತಿ ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ

(ಸೇವೆಗಳು–3)

**ವಿಷಯ:** ಶ್ರೀ ಸಿ.ಜಿ. ಮೃತ್ಯುಂಜಯಪ್ಪ, ನಿವೃತ್ತ ತಹಶೀಲ್ದಾರ್, ಇವರ ವೇತನವನ್ನು ಶ್ರೀ ಬಿ.ಆರ್. ಪಾಂಡುರಂಗನಾಥ, ನಿವೃತ್ತ ತಹಶೀಲ್ದಾರ್, ಇವರ ವೇತನಕ್ಕೆ ಸಮನಾಗಿ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1 ಬೆಂಗಳೂರು ವಿಭಾಗಾಧಿಕಾರಿಯವರ ಪತ್ರದ ಸಂ:ಸಿಬ್ಬಂದಿ(1)ಸಿಆರ್ 22:00–01 ದಿ.31.3.2003.

2 ಬೆಂಗಳೂರು ವಿಭಾಗಾಧಿಕಾರಿಯವರ ಪತ್ರದ ಸಂ:ಸಿಬ್ಬಂದಿ(1)ವಿವ22:2000–01 ದಿ.6.6.2000.

3 ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ಇವರ ಪತ್ರ ಸಂಖ್ಯೆ: ಸಿಬ್ಬಂದಿ/ವಿವ/66/98–99 ದಿ.18.10.04.

**ಪ್ರಸ್ತಾವನೆ:–**

ಶ್ರೀ ಸಿ.ಜಿ. ಮೃತ್ಯುಂಜಯಪ್ಪ, ನಿವೃತ್ತ ತಹಶಿಲ್ದಾರ್, ಇವರು ತಮ್ಮ ವೇತನವನ್ನು ಅವರಿಗಿಂತ ಕಿರಿಯ ನೌಕರರಾದ ಶ್ರೀ ಜಿ.ಆರ್. ಪಾಂಡುರಂಗನಾಥ, ತಹಶೀಲ್ದಾರ್ ಇವರು ಪಡೆಯುತ್ತಿರುವ ವೇತನಕ್ಕೆ ಸರಿಸಮಾನಗೊಳಿಸುವಂತೆ ಕೋರಿ ಇಬ್ಬರು ಅಧಿಕಾರಿಗಳ ವೇತನದ ತುಲನಾತ್ಮಕ ತಃಖ್ತೆಯನ್ನು ಮೇಲೆ ಕ್ರಮಸಂಖ್ಯೆ(1) ಮತ್ತು (2)ರಲ್ಲಿ ಓದಲಾದ ಪತ್ರಗಳಲ್ಲಿ ಬೆಂಗಳೂರು ವಿಭಾಗಾಧಿಕಾರಿಯವರು ಪ್ರಸ್ತಾವನೆಯನ್ನು ಕಳೂಹಿಸಿದ್ದರು. ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಜಿಲ್ಲಾಧಿಕಾರಿಗಳು ದಾವಣಗೆರೆ ಇವರಿಂದ ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ವರದಿ ಪಡೆಯಲಾಯಿತು. ಸದರಿ ರದಿಯಲ್ಲಿ ಶ್ರೀ ಜಿ.ಆರ್. ಪಾಂಡುರಂಗನಾಥ್, ಇವರ ವೇತನವನ್ನು ಸವೆಯಲ್ಲಿ ಅವರಿಗಿಂತ ಕಿರಿಯರಾಗಿದ್ದ ಶ್ರೀ ಬಿ.ಆರ್. ರಾಮಚಂದ್ರಪ್ಪ ಇವರ ವತನಕ್ಕೆ ಸರಿಸಮಾನಗೊಳಿಸಿ ದಿ.30.4.1977ಕ್ಕೆ ರೀ ಪಾಂಡುರಂಗನಾಥ ಇವರ ವೇತನವನ್ನು ರೂ.630/–ಕ್ಕೆ ನಿಗದಿಪಡಿಸಿ ವಿಭಾಗಾಧಿಕಾರಿಗಳು, ಬೆಂಗಳೂರು ಇವರ ಅಧಿಕೃತ ಜ್ಞಾಪನಾ ಪತ್ರದ ಸಂ:ಸಿಬ್ಬಂದಿ(2) ಸಿಆರ್/23/96–97, ದಿ:17.2.98ರ ಪ್ರಕಾರ ನಿಗದಿಪಡಿಸಿದ್ದು, ಅದರಂತೆ ಶ್ರೀ ಸಿ.ಜಿ. ಮೃತ್ಯುಂಜಯಪ್ಪ, ಇವರಿಗೆ ದಿ.1.9.77ರಲ್ಲಿ ರೂ.630/–ಕ್ಕೆ ನಿಗದಿಪಡಿಸಿದೆ. ಆದಕಾರಣ, ಶ್ರೀ ಸಿ.ಜಿ. ಮೃತ್ಯುಂಜಯಪ್ಪ, ಇವರ ವೇತನವನ್ನು ದಿ.30.4.1977ಕ್ಕೆ ರೂ.630/–ಕ್ಕೆ ನಿಗದಿಪಡಿಸಲು ಪ್ರಸ್ತಾವನೆ ಕಳೂಹಿಸಿಕೊಡಲಾಗಿದೆ.

ಈ ವೇತನ ವ್ಯತ್ಯಾಸವನ್ನು ಸರಿಪಡಿಸಬೇಕಾಗಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂ.ಇ.36 ಎಎಸ್.ಜಿ.2003, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿ.ಜಿ. ಮೃತ್ಯುಂಜಯಪ್ಪ, ನಿವೃತ್ತ ತಹಶೀಲ್ದಾರ್, ಇವರ ವೇತನವನ್ನು ಅವರಿಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ಜಿ.ಆರ್. ಪಾಂಡುರಂಗನಾಥ, ನಿವೃತ್ತ ತಹಶೀಲ್ದಾರ್, ಇವರ ವೇತನ ಮಟ್ಟಕ್ಕೆ ರೂ.600/– ರಿಂದ ರೂ.630/– ಗಳಿಗೆ ಹೆಚ್ಚಿಸಲು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ.11ಎಸ್‌ಆರ್‌ಪಿ.1978, ದಿನಾಂಕ:20.4.1978, ಎಫ್‌ಡಿ.68ಎಸ್‌ಆರ್‌ಪಿ 1978, ದಿನಾಂಕ:31.1.1979 ಗಳನ್ವಯ ದಿ:30.4.1977 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿದೆ.

ಶ್ರೀ ಸಿ.ಜಿ. ಮೃತ್ಯುಂಜಯಪ್ಪ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 51 ಮತ್ತು 53ರ ಅನ್ವಯ ಕ್ರಮಬದ್ದಗೊಳಿಸಲು ಸರ್ಕಾರವು ಅನುಮೋದನೆ ನೀಡಿದೆ.

ಈ ಆದೇಶವನ್ನು ಆಂತರಿಕ, ಆರ್ಥಿಕ ಸಲಹೆಗಾರರು ಇವರ ಟಿಪ್ಪಣಿ ಸಂ:ಕಂ.ಇ.17815 ಐಎಫ್‌ಎ 2006, ದಿನಾಂಕ:05.04.2006ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1525

**ಆರ್. ಶ್ರೀಮತಿ ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಜಿ.ಜೆ. ಮಿರಾಂಡ, ಹಿಂದಿನ ತಹಶೀಲ್ದಾರ್(ಪ್ರಸ್ತುತ ನಿವೃತ್ತ) ಅಂಕೋಲಾ ತಾಲ್ಲೂಕು ಹಾಗೂ ಶ್ರೀ ಶ್ರೀಪಾದ ಎ.ಬಂಟ, ಉಪ ತಹಶೀಲ್ದಾರ್, ಅಂಕೋಲಾ ಉತ್ತರ ಕನ್ನಡ ಜಿಲ್ಲೆ ಇವರ ಲೋಕಾಯುಕ್ತ ಜಂಟಿ ಇಲಾಖಾ ವಿಚಾರಣೆ–ಆರೋಪಿತರನ್ನು ಆರೋಪ ಮುಕ್ತರನ್ನಾಗಿಸುವ ಕುರಿತು.

**ಓದಲಾಗಿದೆ:**1) ಸರ್ಕಾರದ ಆದೇಶ ಸಂಖ್ಯೆ:ಕಂಇ 27 ಎಡಿಇ 04,ದಿನಾಂಕ: 05–08–2004.

2) ಗೌರವಾನ್ವಿತ ;ಲೋಕಾಯುಕ್ತರು ಕರ್ನಾಟಕ, ಇವರ ಪತ್ರ ಸಂಖ್ಯೆ:ಲೋಕ/ಎಆರ್‌ಇ–1/ಇಎನ್‌ಕ್ಯೂ–8/2004–05, ದಿನಾಂಕ:22–01–2006.

ಪ್ರಸ್ತಾವನೆ:

ಶ್ರೀ ಜಿ.ಜೆ. ಮಿರಾಂಡ, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತ) ಅಂಕೋಲಾ ತಾಲ್ಲೂಕು, ಹಾಗೂ ಶ್ರೀ ಶ್ರೀಪಾದ ಎ.ಭಂಟ, ಉಪ ತಹಶೀಲ್ದಾರ್, ಅಂಕೋಲಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಇವರುಗಳ ವಿರುದ್ಧ ಶ್ರೀಮತಿ ರಮಾಬಾಯಿ ಕೋ ಮಾದವ ಶೆಟ್ಟಿ, ಹೊನ್ನೇಕೇರಿ, ಅಂಕೋಲ ತಾಲ್ಲೂಕು, ರವರು ಸಲ್ಲಿಸಿದ ದೂರಿನಲ್ಲಿ ಸದರಿಯವರ ಕುಟುಂಬ ಜೀವಿತ ಪ್ರಮಾಣ ಪತ್ರವನ್ನು (uccessions) ನೀಡಲು ಕೋರಿದಂತೆ ಈ ಹಿಂದೆ 04 ಜನಗಳಿಗೆ ಕುಟುಂಬ ಜೀವಿತ ಪ್ರಮಾಣ ಪತ್ರ ನೀಡಿದಾಗ ಅರ್ಜಿದಾರರ ಅತ್ತೆಯವರ ಹೆಸರನ್ನು ಸೇರಿಸಿರುವುದಿಲ್ಲ. ಆದರೆ ಅರ್ಜಿದಾರರು ಅವರ ಅರ್ಜಿಯಲ್ಲಿ ಅವರ ಅತ್ತೆಯವರ ಹೆಸರನ್ನು ಸೇರಿಸಿಲ್ಲದಿದ್ದರೂ ಅವರ ಅತ್ತೆಯ ಹೆಸರನ್ನು ಸೇರಿಸಿ, ಅರ್ಜಿದಾರರಿಗೆ ಕುಟುಂಬ ಜೀವಿತ (succession) ಪ್ರಮಾಣಪತ್ರವನ್ನು ನೀಡಿರುವ ಆಪಾದನೆ ಮೇಲೆ ಶ್ರೀ ಜಿ.ಜೆ.ಮೀರಾಂಡ, ಹಿಂದಿನ ತಹಶೀಲ್ದಾರ್, (ಪ್ರಸ್ತುತ ನಿವೃತ್ತ) ಅಂಕೋಲಾ ಹಾಗೂ ಶ್ರೀ ಶ್ರೀಪಾದೆ ಎ.ಭಂಟ ಉಪ ತಹಶೀಲ್ದಾರ್,ಅಂಕೋಲಾರವರುಗಳ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಿ ವರದಿ ನೀಡಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ14–ಎ ರನ್ವಯ ಈ ಪ್ರಕರಣವನ್ನು ಗೌರವಾನ್ವಿತ ಲೋಕಾಯುಕ್ತರು, ಕರ್ನಾಟಕ, ಬೆಂಗಳೂರು, ಇವರಿಗೆ ವಹಿಸಿ ಮೇಲೆ ಓದಲಾದ ಸಂಖ್ಯೆ(1)ರ ಆದೇಶದಲ್ಲಿ ಆದೇಶಿಸಲಾಗಿತ್ತು.

ಈ ಬಗ್ಗೆ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ (2) ಕ್ಲಾಸ್ (ಬಿ) ರನ್ವಯ ಹೆಚ್ಚುವರಿ ನಿಬಂಧಕರು ವಿಚಾರಣೆ (1), ಕರ್ನಾಟಕ ಲೋಕಾಯುಕ್ತ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಿದ್ದು, ಸದರಿಯವರು ಪ್ರಕರಣದ ವಿಚಾರಣೆ ನಡೆಸಿ ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಆಪಾದಿತರುಗಳ ಮೇಲೆ ಹೊರಿಸಲಾದ ಆರೋಪಗಳು ಸಾಬೀತಾಗಿಲ್ಲವೆಂದು ನೀಡಿರುವ ವರದಿ ಮತ್ತು ದಾಖಲೆಗಳನ್ನು ಕಳುಹಿಸಿ, ಆಪಾದಿತ 1 ಮತ್ತು 2ರವರ ಆರೋಪಗಳು ಸಾಬೀತಾಗಿಲ್ಲದಿರುವುದರಿಂದ ಸದರಿಯವರನ್ನು ಆರೋಪ ಮುಕ್ತರನ್ನಾಗಿಸಲು ಮೇಲೆ ಓದಲಾದ ಕ್ರ.ಸಂ.(2) ರ ಪತ್ರದಲ್ಲಿ ಗೌರವಾನ್ವಿತ ಲೋಕಾಯುಕ್ತರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಆರೋಪಗಳು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿ, ಸರ್ಕಾರವು ವಿಚಾರಣಾಧಿಕಾರಿಗಳ ವರದಿ ಮತ್ತು ಗೌರವಾನ್ವಿತ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡು ಶ್ರೀ ಜಿ.ಜೆ.ಮಿರಾಂಡ, ಹಿಂದಿನ ತಹಶೀಲ್ದಾರ್ (ಹಾಲಿ ನಿವೃತ್ತರು), ಅಂಕೋಲಾ ಹಾಗೂ ಶ್ರೀ ಶ್ರೀಪಾದ ಎ.ಭಂಟ, ಉಪ ತಹಶೀಲ್ದಾರ್, ಇವರುಗಳ ವಿರುದ್ಧ ಆರೋಪಗಳ ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಅವರುಗಳನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಆರ್‌ಡಿ 27 ಎಡಿಇ 2004, ಬೆಂಗಳೂರು, ದಿನಾಂಕ:20ನೇ ಸೆಪ್ಟೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಜಿ.ಜೆ. ಮಿರಾಂಡ, ಹಿಂದಿನ ತಹಶೀಲ್ದಾರ್, ಅಂಕೋಲಾ (ಹಾಲಿ ನಿವೃತ್ತರು) ಹಾಗೂ ಶ್ರೀ ಶ್ರೀಪಾದ ಎ.ಭಂಟ, ಉಪ ತಹಶೀಲ್ದಾರ್, ಅಂಕೋಲಾ ತಾಲ್ಲೂಕು ಅವರುಗಳ ವಿರುದ್ಧ ಮಾಡಲಾದ ಆರೋಪಗಳಿಂದ ಅವರುಗಳನ್ನು ದೋಷಮುಕ್ತರನ್ನಾಗಿಸಿ ಆದೇಶಿಸಿದೆ.

ಶ್ರೀ ಜಿ.ಜೆ. ಮಿರಾಂಡ, ಹಿಂದಿನ ತಹಶೀಲ್ದಾರ್, ಅಂಕೋಲಾ (ಹಾಲಿ ನಿವೃತ್ತರು), ಅಂಕೋಲಾ (ಹಾಲಿ ನಿವೃತ್ತರು) ಹಾಗೂ ಶ್ರೀ ಶ್ರೀಪಾದ ಭಂಟ, ಉಪ ತಹಶೀಲ್ದಾರ್, ಅಂಕೋಲಾ, ಅವರುಗಳು ಈ ಪ್ರಕರಣದ ಮಟ್ಟಿಗೆ ವಿಚಾರಣೆ ನಡೆಯದಿದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯ ಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1526

**ಆರ್. ಶ್ರೀಮತಿ ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕೆಲವು ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ

**ಓದಲಾಗಿದೆ :**

1) ಸರ್ಕಾರಿ ಆದೇಶ ಸಂಖ್ಯೆ: ಲಾ 275 ಎಲ್‌ಸಿಇ 2000 ದಿನಾಂಕ: 25.7.02.
2) ಸರ್ಕಾರಿ ಆದೇಶ ಸಂಖ್ಯೆ: ಲಾ 51 ಪಿಪಿಇ 04 ದಿನಾಂಕ: 28.4.04.
3) ಸರ್ಕಾರಿ ಆದೇಶ ಸಂಖ್ಯೆ: ಒಇ 168 ಪಿಪಿಇ 05 ದಿನಾಂಕ: 15.10.05.
4) ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 652 ಪಿಪಿಇ 05 ದಿನಾಂಕ: 15.11.05.
5) ಸರ್ಕಾರಿ ಆದೇಶ ಸಂಖ್ಯೆ: ಒಇ 690 ಪಿಪಿಇ 05 ದಿನಾಂಕ: 21.11.05.
6) ಸರ್ಕಾರಿ ಆದೇಶ ಸಂಖ್ಯೆ: ಒಇ 690 ಪಿಪಿಇ 05 ದಿನಾಂಕ: 20.1.05.
7) ಸರ್ಕಾರಿ ಆದೇಶ ಸಂಖ್ಯೆ: ಒಇ 950 ಪಿಪಿಇ 05 ದಿನಾಂಕ: 31.5.06.
8) ಸರ್ಕಾರಿ ಆದೇಶ ಸಂಖ್ಯೆ: ಒಇ 775 ಪಿಪಿಇ 05 ದಿನಾಂಕ: 19.6.06.
9) ಸರ್ಕಾರಿ ಆದೇಶ ಸಂಖ್ಯೆ: ಒಇ 29 ಪಿಪಿಇ 06 ದಿನಾಂಕ: 24.6.06.
10) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರ ನಂ ಪಿಎನ್/ಸಿಶಾ-1/07/2005-06, ದಿನಾಂಕ: 31.7.2006.

**ಪ್ರಸ್ತಾವನೆ :**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದ ತಃಖ್ತೆಯ ಅಂಕಣ 4ರಲ್ಲಿ ತೋರಿಸಿರುವ ನ್ಯಾಯಾಲಯಗಳಲ್ಲಿ ಅಂಕಣ 2ರಲ್ಲಿ ಸೂಚಿಸಿರುವ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಅಂಕಣ 5ರಲ್ಲಿ ತೋರಿಸಿರುವ ಸರ್ಕಾರಿ ಆದೇಶಗಳಲ್ಲಿ ಅಂಕಣ 6ರಲ್ಲಿ ತೋರಿಸಿರುವ ಅಧಿಯವರೆಗೆ ಸದರಿ ತಾತ್ಕಾಲಿಕ ಹುದ್ದೆಗಳನ್ನು ಕಡೆಯದಾಗಿ ಮುಂದುವರೆಸಿ ಆದೇಶಗಳನ್ನು ಹೊರಡಿಸಲಾಗಿದೆ. ಅಂಕಣ 4ರಲ್ಲಿ ತೋರಿಸಿರುವ ನ್ಯಾಯಾಲಯಗಳಲ್ಲಿ ಅಭಿಯೋಜನಾ ಇಲಾಖೆಗೆ ಸಂಬಂಧಿಸಿದ ಕಚೇರಿಗಳಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಹುದ್ದೆಗಳನ್ನು ದಿನಾಂಕ:31.03.2008ರ ವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು ಅಸ್ಥಿತ್ವದಲ್ಲಿರುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸುವಂತೆ ಮೇಲೆ 10ರಲ್ಲಿ ಓದಲಾದ ದಿನಾಂಕ: 31.07.2006 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 380 ಪಿಪಿಇ 2006, ಬೆಂಗಳೂರು, ದಿನಾಂಕ: 13ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಅನುಬಂಧದ ತಃಖ್ತೆಯ ಅಂಕಣ 4ರಲ್ಲಿ ತೋರಿಸಿರುವ ನ್ಯಾಯಾಲಯಗಳಲ್ಲಿ ಅಂಕಣ 2ರಲ್ಲಿ ತೋರಿಸಿರುವ ಅಭಿಯೋಜನಾ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 31.03.2008 ರವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು ಅಸ್ಥಿತ್ವದಲ್ಲಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಸರ್ಕಾರವು ಮಂಜೂರಾತಿ ನೀಡಿದೆ.

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು 2014 - ನ್ಯಾಯ ಪರಿಪಾಲನೆ 124 ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು - 02 - ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, 002-ಅಧಿಕಾರಿಗಳ ವೇತನ, 003 ಸಿಬ್ಬಂದಿ ವೇತನ ಈ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅದಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು, ಕಾಫಿಪೋಸ ಮತ್ತು ಅಭಿಯೋಗಗಳು)

**ಅನುಬಂಧ**

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿನ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ ವಿವರಗಳ ಪಟ್ಟಿ**

| ಕ್ರ. ಸಂ. | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ | ಮಂಜೂರಾಗಿರುವ ಸ್ಥಳ | ಹುದ್ದೆಗಳನ್ನು ಮುಂದುವರೆಸಿದ ಆದೇಶ | ಅವಧಿ ಮುಗಿಯುವ ದಿನಾಂಕ | ಹುದ್ದೆಗಳನ್ನು ಮುಂದುವರೆಸಬೇಕಾದ ಅವಧಿ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಸರ್ಕಾರಿ ಅಭಿಯೋಜಕರು | 01 | 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ತುಮಕೂರು | ಹೆಚ್‌ಡಿ 652 ಪಿಪಿಇ 2005 ದಿನಾಂಕ 15.11.2005 | 24.06.2006 | 31.3.2008 ಅಥವಾ ನ್ಯಾಯಾಲಯವು ಅಸ್ಥಿತ್ವದಲ್ಲಿರುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ. | |
| | ಶೀಘ್ರಲಿಪಿಗಾರರು | 01 | -”- | -”- | -”- | -”- | |
| | ಪ್ರಥಮ ದರ್ಜೆ ಸಹಾಯಕರು | 01 | -”- | -”- | -”- | -”- | |
| | ಬೆರಳಚ್ಚುಗಾರರು | 01 | -”- | -”- | -”- | -”- | |
| | ಅಟೆಂಡರ್ | 01 | -”- | -”- | -”- | -”- | |
| | ಜವಾನ | 01 | -”- | -”- | -”- | -”- | |
| 2 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಹೆಚ್ಚುವರಿ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೈಲಹೊಂಗಲ | ಒಇ 690 ಪಿಪಿಇ 2005 ದಿನಾಂಕ 20.1.2006 | 31.3.2007 | -”- | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| | ಬೆರಳಚ್ಚುಗಾರರು | 01 | ಹೆಚ್ಚುವರಿ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೈಲಹೊಂಗಲ | ಒಇ 690 ಪಿಪಿಇ 2005 ದಿನಾಂಕ 20.1.2006 | 31.3.2007 | 31.3.2008 ಅಥವಾ ನ್ಯಾಯಾಲಯವು ಅಸ್ತಿತ್ವದಲ್ಲಿರುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ. | |
| 3 | ಸಹಾಯಕ ಅಭಿಯೋಜಕರು | 01 | ಹೆಚ್ಚುವರಿ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಖಾನಾಪುರ | -"- | -"- | -"- | |
| 4 | ಸರ್ಕಾರಿ ಅಭಿಯೋಜಕರು | 01 | ವಿಶೇಷ ಎನ್.ಡಿ.ಪಿ.ಎಸ್. ನ್ಯಾಯಾಲಯ, ಬೆಂಗಳೂರು | -"- | -"- | -"- | |
| | ಪ್ರಥಮ ದರ್ಜೆ ಸಹಾಯಕರು | 01 | -"- | -"- | -"- | -"- | |
| | ಶೀಘ್ರಲಿಪಿಗಾರರು | 01 | -"- | -"- | -"- | -"- | |
| | ದಲಾಯತ್ | 01 | -"- | -"- | -"- | -"- | |
| 5 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಹೆಚ್ಚುವರಿ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಾವೇರಿ | ಲಾ 1 ಪಿಪಿಇ 2005 ದಿನಾಂಕ 28.4.2004 | 31.3.2004 | -"- | |
| | ಬೆರಳಚ್ಚುಗಾರ-ವ-ಸಹಾಯಕರು | 01 | ಹೆಚ್ಚುವರಿ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಾವೇರಿ | -"- | -"- | -"- | -"- |
| 6 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಂಕೇಶ್ವರ | ಒಇ 950 ಪಿಪಿಇ 2005 ದಿನಾಂಕ 31.5.2006 | 18.4.2007 | -"- | -"- |
| | ಬೆರಳಚ್ಚುಗಾರ-ವ-ಸಹಾಯಕರು | 01 | ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಂಕೇಶ್ವರ | -"- | -"- | -"- | -"- |
| | ದಲಾಯತ್ | 01 | -"- | -"- | -"- | -"- | -"- |
| 7 | ಸರ್ಕಾರಿ ಅಭಿಯೋಜಕರು | 30 | ಶೀಘ್ರ ವಿಲೇವಾರಿ ನ್ಯಾಯಾಲಯ | ಒಇ 775 ಪಿಪಿಇ 2005 ದಿನಾಂಕ 19.6.2006 | 11.11.2006 | -"- | -"- |
| 8 | ಸರ್ಕಾರಿ ಅಭಿಯೋಜಕರು | | ಚರ್ಚ್‌ಬಾಂಬ್‌ಸ್ಫೋಟ/ ನಕಲಿ ಛಾಪಾ ಕಾಗದ/ ಕಂಬಾಲದಲ್ಲಿ ಪ್ರಕರಣ, ವಿಶೇಷ ನ್ಯಾಯಾಲಯ, ಬೆಂಗಳೂರು | ಲಾ 275 ಎಲ್‌ಸಿಇ 2000 (ಭಾಗ) ದಿನಾಂಕ 25.7.2002 | ಅವಧಿ ನಮೂದಿಸಿರುವುದಿಲ್ಲ | -"- | -"- |
| | ಪ್ರತಮ ದರ್ಜೆ ಸಹಾಯಕರು | 03 | -"- | -"- | -"- | -"- | -"- |
| | ಶೀಘ್ರಲಿಪಿಗಾರರು | 03 | -"- | -"- | -"- | -"- | -"- |
| 9 | ಅಟೆಂಡರ್ಸ್<br>ಆಡಳಿತಾಧಿಕಾರಿಗಳು | 03<br>01 | -"-<br>ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | -"-<br>ಒಇ 168 ಪಿಪಿಇ 2005 ದಿನಾಂಕ 18.10.2005 | -"-<br>17.10.2007 | -"-<br>-"- | -"- |
| 10 | ಲೆಕ್ಕ ಪತ್ರ ಅಧೀಕ್ಷಕರು | 01 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಒಇ 29 ಪಿಪಿಇ 2006 ದಿನಾಂಕ 24.6.2006 | -"- | -"- | |

ಸರ್ಕಾರಿ ಆದೇಶ ಸಂಖ್ಯೆ ಒಇ 380 ಪಿಪಿಇ 2006 ಬೆಂಗಳೂರು ದಿನಾಂಕ: 13.11.2006

**ಆರ್. ನಿಸಾರ್ ಅಹಮದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು, ಕಾಫಿಪೋಸ ಮತ್ತು ಅಭಿಯೋಗಗಳು)

ಪಿ.ಆರ್. 1639

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿತ್ತಾಪೂರ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗದ ಕಾಮಗಾರಿಗಳಲ್ಲಿ ಅವ್ಯವಹಾರ ಸಂಬಂಧದಲ್ಲಿ ಅಮಾನತ್ತುಗೊಂಡ ಶ್ರೀ ಕೆ. ಭೀಮರೆಡ್ಡಿ, ಕಿ.ಇಂ. ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ ಆದೇಶ

**ಓದಲಾಗಿದೆ :**
1) ಮುಖ್ಯಇಂಜಿನಿಯರ್, ಪಂ.ರಾ.ಇಂ.ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ. ಮುಇಂ: ಬೆಂ: ಸಿಬ್ಬಂದಿ-7: 7982: 05-06, ದಿನಾಂಕ 22.3.06.
2) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ 12 ಇಎನ್‌ಕ್ಯೂ06, ದಿ: 23.5.2006.
3) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ 12 ಇಎನ್‌ಕ್ಯೂ06, ದಿ: 22.8.2006.
4) ಶ್ರೀ ಭೀಮರೆಡ್ಡಿ, ಕಿ.ಇಂ. (ಅಮಾನತ್ತಿನಲ್ಲಿ) ಇವರ ಮನವಿ ದಿ:19.8.2006

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1), ದಿನಾಂಕ:22.3.06 ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಚಿತ್ತಾಪುರ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಈ ಕೆಳಕಂಡ ಅಧಿಕಾರಿಗಳು ಮತ್ತು ಸಿಬ್ಬಂದಿ 2003-04ನೇ ಆರ್ಥಿಕ ಸಾಲಿನಲ್ಲಿ ಸರ್ಕಾರದಿಂದ ಸಾರ್ವಜನಿಕರಿಗಾಗಿ ಹಲವಾರು ಯೋಜನೆಗಳಿಗಾಗಿ ಬಿಡುಗಡೆ ಮಾಡಿದ್ದ ಅನುದಾನದಲ್ಲಿ ಕಾಮಗಾರಿಗಳನ್ನು ನಿರ್ವಹಿಸಿ, ಇಲಾಖೆಗೆ ವಹಿಸಿಕೊಡಬೇಕಾಗಿದ್ದು, ಈ ಅಧಿಕಾರಿಗಳ ಕರ್ತವ್ಯ ನಿರ್ಲಕ್ಷತೆಯಿಂದ ಹಲವಾರು ಯೋಜನೆಗಳು ವಿಫಲವಾಗಿದ್ದು, ಇದಕ್ಕೆ ಇವರೇ ನೇರ ಜವಾಬ್ದಾರರೆಂದು ತಿಳಿಸುತ್ತಾ ಇವರುಗಳ ಮೇಲೆ ದೋಷಾರೋಪಣಾ ಪಟ್ಟಿ ತಯಾರಿಸಿ ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಕಳುಹಿಸಿ ಕೊಟ್ಟಿದ್ದರು:

1. ಶ್ರೀ ಮರೆಪ್ಪಾ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ)
2. ಶ್ರೀ ಕೆ. ಭೀಮರೆಡ್ಡಿ, ಅಂದಿನ ಕಿರಿಯ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.
3. ಶ್ರೀ ಶಶಿಕಾಂತ ಘನಾತೆ, ಅಂದಿನ ಕಿರಿಯ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.
4. ಶ್ರೀ ಗೋಪಾಲ ರಾಠೋಡ, ಅಂದಿನ ಕಿರಿಯ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.
5. ಶ್ರೀ ಗುರುರಾಜ ಹರವಾಳಕರ, ಅಂದಿನ ಕಿರಿಯ ಇಂಜಿನಿಯರ್ , ಪಂರಾಇಂ ಉಪ ವಿಭಾಗ ಚಿತ್ತಾಪೂರ.
6. ಶ್ರೀ ಶಿವಲಿಂಗಪ್ಪ ಎನ್, ಅಂದಿನ ಕಿರಿಯ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.
7. ಮೊನಪ್ಪಾ, ಅಂದಿನ ಸಹಾಯಕ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.

ಸರ್ಕಾರವು ಮುಖ್ಯ ಇಂಜಿನಿಯರ್‌ರವರು ವರದಿಯನ್ನು ಕೂಲಂಕುಶವಾಗಿ ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (2), ದಿನಾಂಕ:23.5.06ರ ಆದೇಶದಲ್ಲಿ ಸರ್ಕಾರವು ನಿವೃತ್ತಿ ಹೊಂದಿದ್ದ ಶ್ರೀ ಮೆರಪ್ಪಾ ,ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರನ್ನು ಹೊರತುಪಡಿಸಿ ಇತರ ಆರು ಮಂದಿಯನ್ನು ಅಮಾನತ್ತಿನಲ್ಲಿರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿ:22.8.06ರ ಆದೇಶದಲ್ಲಿ ಸರ್ಕಾರವು 1) ಶ್ರೀ ಮೊನಪ್ಪ, ಸಹಾಯಕ ಇಂಜಿನಿಯರ್, 2) ಶ್ರೀ ಶಶಿಕಾಂತ ಘನಾತೆ, ಕಿರಿಯ ಇಂಜಿನಿಯರ್, ಮತ್ತು 3) ಶ್ರೀ ಗುರುರಾಜ ಹರವಾಳಕರ, ಕಿರಿಯ ಇಂಜಿನಿಯರ್ ಇವರುಗಳ ಅಮಾನತ್ತನ್ನು ಇಲಾಖಾ ವಿಚಾರಣೆ ಬಾಕಿ ಇಟ್ಟು ತೆರವುಗೊಳಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿ:19.8.06ರ ತಮ್ಮ ಪತ್ರದಲ್ಲಿ ಶ್ರೀ ಭೀಮರೆಡ್ಡಿ, ಕಿರಿಯ ಇಂಜಿನಿಯರ್, ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ತಮ್ಮನ್ನು ಅಮಾನತ್ತುಗೊಳಿಸಿದ್ದರೂ, ಅದೇ ಪ್ರಕರಣದಲ್ಲಿ ಸರ್ಕಾರವು ದಿ: 23.5.06ರ ಆದೇಶದಲ್ಲಿ ಅಮಾನತ್ತುಗೊಳಿಸಿರುತ್ತದೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಉಳಿದ ಮೂರು ಜನ ಇಂಜಿನಿಯರ್‌ಗಳ ಅಮಾನತ್ತನ್ನು ತೆರವುಗೊಳಿಸಿರುವುದರಿಂದ ತಮ್ಮ ಅಮಾನತ್ತನ್ನು ಕೂಡಾ ತೆರವುಗೊಳಿಸಿ, ಸೇವೆ ಸಲ್ಲಿಸಲು ಅನುಮತಿ ಕೊಡಬೇಕೆಂದು ಕೋರಿರುತ್ತಾರೆ. ಸರ್ಕಾರವು ವಿಷಯವನ್ನು ಕೂಲಂಕುಶವಾಗಿ ಪರಿಶೀಲಿಸಿ, ಶ್ರೀ ಭೀಮರೆಡ್ಡಿ, ಕಿರಿಯ ಇಂಜಿನಿಯರ್, ಇವರ ಮೇಲೆ ಇಲಾಖಾ ವಿಚಾರಣೆಯಮ್ನ ಬಾಕಿ ಇಟ್ಟು, ಸದರಿಯವರ ಅಮಾನತ್ತನ್ನು ತೆರವುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ ಸಂಖ್ಯೆ ಗ್ರಾಅಪ 12 ಇಎನ್‌ಕ್ಯೂ 06, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2006

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) 1957ರ ನಿಯಮ -10ನೇ ನಿಯಮದ (5)ನೇ ಉಪನಿಯಮ (ಸಿ) ಪ್ರಕಾರ ಶ್ರೀ ಕೆ. ಭೀಮರೆಡ್ಡಿ, ಕಿರಿಯ ಇಂಜಿನಿಯರ್ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಸದರಿಯವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿದೆ.

ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಶ್ರೀ ಭೀಮರೆಡ್ಡಿ, ಕಿರಿಯ ಇಂಜಿನಿಯರ್ ಇವರನ್ನು ಗುಲ್ಬರ್ಗಾ ಜಿಲ್ಲೆಯಿಂದ ಹೊರಗೆ ಹಣಕಾಸು ವ್ಯವಹಾರ ಇಲ್ಲದ ಖಾಲಿ ಇರುವ ಸ್ಥಳದಲ್ಲಿ ನಿಯುಕ್ತಿಗೊಳಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ,(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1408

**ವಿಷಯ :** ಶ್ರೀ ಕೆ.ಎ. ಅಥೋನಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಜೋಯಿಡಾ ಮತ್ತು ಶ್ರೀ ಎಂ.ಬಿ. ಬಾವಳಕರ, ಅಂದಿನ ಉಗ್ರಾಣ ಸಹಾಯಕ (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ -ಮಂಡನಾಧಿಕಾರಿ ಬದಲಾವಣೆ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ 17: ಇಎನ್‌ಕ್ಯೂ 03, ದಿ: 19.7.2006.
2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪತ್ರ ಸಂ.ಜಿಪಂಅ:ಲೋಕೋ:ಇವಿ:ಸಿಆರ್-61:00-01, ದಿ. 29.7.2006.

**ಪ್ರಸ್ತಾವನೆ :**

ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ (1),ರ ಆದೇಶದಲ್ಲಿ ಶ್ರೀ ಕೆ.ಎ. ಅಧೋನಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಜೋಯಿಡಾ ಮತ್ತು ಶ್ರೀ ಎಂ.ಬಿ. ಬಾವಳಕರ, ಅಂದಿನ ಉಗ್ರಾಣ ಸಹಾಯಕ (ಪ್ರಸ್ತುತ ನಿವೃತ್ತ) ಇವರ ಮೇಲಿನ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗಧಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ನಿಯಮ 13 ರನ್ವಯ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ 11(2)ರ ರೀತ್ಯ ಶ್ರೀ ಎಸ್. ಇಂದೂಧರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಸಹಾಯಕ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ತಮ್ಮ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲಾ ಪಂಚಾಯತ್ ಸಹಾಯಕ ಕಾರ್ಯದರ್ಶಿ ಹುದ್ದೆ ಹಲವು ವರ್ಷಗಳಿಂದ ಖಾಲಿ ಇರುತ್ತದೆ ಹಾಗೂ ಈ ಪ್ರಕರಣದ ವಿಷಯವು ಇಂಜಿನಿಯರಿಂಗ್ ಉಪ ವಿಭಾಗದ ಸಾಮಗ್ರಿಗಳ ಉಗ್ರಾಣ ಕೊರತೆಗೆ ಸಂಬಂಧಿಸಿರುವುದರಿಂದ ತಾಂತ್ರಿಕ ವಿಷಯದಲ್ಲಿ ಪರಿಣಿತಿ ಹೊಂದಿರುವ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು,ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಶಿರಸಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕಗೊಳಿಸಲು ಕೋರಿರುತ್ತಾರೆ. ಸರ್ಕಾರವು ಸದರಿ ವಿಷಯವನ್ನು ಕೂಲಂಕುಶವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 12 ಇಎನ್‌ಕ್ಯೂ 03 ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್, 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಕೆ.ಎ. ಅಧೋನಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಜೋಯಿಡಾ ಮತ್ತು ಶ್ರೀ ಎಂ.ಬಿ. ಬಾವಳಕರ, ಅಂದಿನ ಉಗ್ರಾಣ ಸಹಾಯಕ (ಪ್ರಸ್ತುತ ನಿವೃತ್ತ) ಇವರ ಮೇಲಿನ ಆಪಾದನೆಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶ ಸಂಖ್ಯೆ. ಗ್ರಾಅಪ 17 ಇಎನ್‌ಕ್ಯೂ 03, ದಿ. 19.7.2006ರಲ್ಲಿ ಮಂಡನಾಧಿಕಾರಿಯಾಗಿ ನೇಮಿಸಲಾಗಿದ್ದ ಸಹಾಯಕ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರನ್ನು ಬದಲಾಯಿಸಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಶಿರಸಿ ಇವರನ್ನು ಮಂಡಾನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1410

ಸರ್ಕಾರದ ಅಧೀನ ಕಾರ್ಯದರ್ಶಿ,(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ :** ಹಾವೇರಿ ಪಂಚಾಯತ್‌ರಾಜ್ ಇಂಜಿನಿಯರಿಂಗ್ ವಿಭಾಗದಲ್ಲಿ ಪ್ರವಾಸ ಭತ್ಯೆ ನಕಲಿ ಬಿಲ್‌ಗಳನ್ನು ತಯಾರಿಸಿ ಸರ್ಕಾರದ ಹಣ ದುರುಪಯೋಗ ಪ್ರಕರಣದ ವಿಚಾರಣೆ-ವಿಚಾರಣಾಧಿಕಾರಿಗಳ ಬದಲಾವಣೆ ಬಗ್ಗೆ ಆದೇಶ

**ಓದಲಾಗಿದೆ :** 1) ಸರ್ಕಾರದ ಪತ್ರ ಸಂಖ್ಯೆ. ಗ್ರಾಅಪ 229 ಜಿಪಅ 04, ದಿ: 11.7.2006.

2) ಶ್ರೀ ಎನ್.ಎಸ್. ಸಂಗೊಳ್ಳಿ, ವಿಚಾರಣಾಧಿಕಾರಿ ಇವರ ಪತ್ರ ದಿ:7.8.2006

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1),ರ ದಿನಾಂಕ:11.7.06 ರ ಸರ್ಕಾರದ ಆದೇಶದಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ಹಾವೇರಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗದಲ್ಲಿ ನಡೆದಿದೆಯೆನ್ನಲಾದ ಪ್ರವಾಸ ಭತ್ಯೆಯ ಬಿಲ್ಲುಗಳ ಅಕ್ರಮಗಳ ಸಂಬಂಧದಲ್ಲಿ ಈ ಕೆಳಕಂಡ ಅಧಿಕಾರಿ/ಸಿಬ್ಬಂದಿಗಳ, ಮೇಲಿನ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗಧಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ನಿಯಮ 13 ರನ್ವಯ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ 11(2)ರ ರೀತ್ಯ ಶ್ರೀ ಎನ್ .ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಹಾವೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಲಾಗಿತ್ತು.

1. ಶ್ರೀ ಜೆ. ರುಕ್ಮಾಂಗದನ್, ಅಂದಿನ ಪತ್ರಾಂಕಿತ ಉಪ ಖಜಾನಾಧಿಕಾರಿಗಳು, ಸವಣೂರು.
2. ಶ್ರೀ ಆರ್.ಎನ್. ದೇಶಪಾಂಡೆ, ಮುಖ್ಯ ಲೆಕ್ಕಿಗರು, ಜಿಲ್ಲಾ ಖಜಾನೆ, ಹಾವೇರಿ.
3. ಶ್ರೀ ಎ.ವೈ. ಮನ್ವಾಚಾರ್ಯ, ಮುಖ್ಯ ಲೆಕ್ಕಿಗರು, ಜಿಲ್ಲಾ ಖಜಾನೆ, ಹಾವೇರಿ.
4. ಶ್ರೀ ಎಂ.ಎಂ. ಮುಲ್ಲಾ, ದ್ವಿ.ದ.ಸ. ಜಿಲ್ಲಾ ಖಜಾನೆ, ಹಾವೇರಿ.
5. ಶ್ರೀ ಟಿ. ವೆಂಕಟೇಶ್ವರ, ಹಿಂದಿನ ಕಾರ್ಯನಿರ್ವಾಹಕ ಇಂಜಿನಿಯರ್.
6. ಶ್ರೀ ಪಿ.ಬಿ. ಹೊಳೆಯಾಚಿ, ಹಿಂದಿನ ಕಾರ್ಯನಿರ್ವಾಹಕ ಇಂಜಿನಿಯರ್.
7. ಶ್ರೀ ಎಸ್.ಎನ್. ಪ್ರಕಾಶ್, ಹಿಂದಿನ ಕಾರ್ಯನಿರ್ವಾಹಕ ಇಂಜಿನಿಯರ್.
8. ಶ್ರೀ ಓ. ಲಕ್ಷ್ಮಣ, ವ್ಯವಸ್ಥಾಪಕರು (ಅಮಾನತ್ತಿನಲ್ಲಿರುವ)
9. ಶ್ರೀ ಗಿರಿಯಪ್ಪ, ಹಿಂದಿನ ಲೆಕ್ಕ ಪರಿಶೋಧನಾಧಿಕಾರಿ.
10. ಶ್ರೀ ಆರ್.ಎಂ. ಯರೇಶಿಮಿ, ಹಿಂದಿನ ಪ್ರಭಾರಿ ಲೆಕ್ಕಪರಿಶೋಧನಾಧಿಕಾರಿ.
11. ಶ್ರೀ ಜೆ.ಸಿ. ಕೀರ್ತಿ, ಹಿಂದಿನ ಲೆಕ್ಕ ಪರಿಶೋಧನಾಧಿಕಾರಿ.
12. ಶ್ರೀ ಪಿ.ಜಿ. ಬೋರಗಾವ, ಹಿಂದಿನ ಮುಖ್ಯ ಲೆಕ್ಕಾಧಿಕಾರಿಗಳು, ಜಿ.ಪಂ. ಹಾವೇರಿ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಈ ಪ್ರಕರಣದ ವಿಚಾರಣಾಧಿಕಾರಿಯಾದ ಶ್ರೀ ಎನ್.ಎಸ್. ಸಂಗೊಳ್ಳಿ, ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ಆದೇಶ ಸಂ. ಗ್ರಾಅಪ 229 ಜಿಪಅ 04, ದಿ:11.7.2006ರ ಮೇರೆಗೆ ತಮ್ಮನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದ್ದು, ತಮ್ಮ ವೈಯಕ್ತಿಕ

ಕಾರಣಗಳಿಗಾಗಿ ವಿಚಾರಣಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಆಗುವುದಿಲ್ಲವೆಂದು ತಿಳಿಸಿರುತ್ತಾರೆ. ಅದರಂತೆ ಸರ್ಕಾರವು ಪರಿಶೀಲಿಸಿ, ಈ ಪ್ರಕರಣದ ವಿಚಾರಣಾಧಿಕಾರಿಯನ್ನು ಬದಲಾಯಿಸಲು ನಿರ್ಧರಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 229 ಜಿಪಅ 04, ಬೆಂಗಳೂರು ದಿನಾಂಕ: 15ನೇ ಸೆಪ್ಟೆಂಬರ್, 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರಿಂದ ಪ್ರಕರಣವನ್ನು ಹಿಂಪಡೆದು, ಶ್ರೀ ಎ. ಕೃಷ್ಣಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರಿಗೆ ವಹಿಸಿದೆ.

ಶ್ರೀ ಎ. ಕೃಷ್ಣಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ಪ್ರಕರಣದ ವಿಚಾರಣೆಯನ್ನು ಶ್ರೀ ಎನ್.ಎಸ್. ಸಂಗೊಳ್ಳಿ, ವಿಚಾರಣಾಧಿಕಾರಿ ಇವರು ವಹಿಸಿಕೊಟ್ಟ ಹಂತದಿಂದ ಮುಂದುವರಿಸಿ, ಸರ್ಕಾರಕ್ಕೆ 3 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ನಿಗಧಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1411

ಸರ್ಕಾರದ ಅಧೀನ ಕಾರ್ಯದರ್ಶಿ,(ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ :** ಶ್ರೀ ಬಿ. ಉಮಾಪತಿ, ಅಂದಿನ ಸಹಾಯಕ ಇಂಜಿನಿಯರ್, ಪಂಚಾಯತ್‌ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ತೀರ್ಥಹಳ್ಳಿ ಇವರು ಉಗ್ರಾಣ ಸಾಮಾಗ್ರಿ ದುರುಪಯೋಗಪಡಿಸಿಕೊಂಡ ಬಗ್ಗೆ ವಿವರವಾದ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ-ಆದೇಶ

**ಓದಲಾಗಿದೆ :**
1) ಮುಖ್ಯ ಇಂಜಿನಿಯರ್, ಪಂ.ರಾ.ಇಂ. ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ. ಮುಇಂ:ಪಂರಾಇಂಇಸಿ: ಸಿ-7:2005-06, ದಿನಾಂಕ 3.4.2006.
2) ಕಾರಣ ಕೇಳುವ ನೋಟೀಸ್ ಸಂಖ್ಯೆ , ಗ್ರಾಅಪ:15ಇಎನ್‌ಕ್ಯೂ :06,ದಿ:17.6.06.
3) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರ ಪತ್ರ ಸಂಖ್ಯೆ, ಜಿಪಂಶಿ:ಸಿ-ಇಂವಿವ-1:05-06, ದಿನಾಂಕ:17.7.06.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಶ್ರೀ ಬಿ. ಉಮಾಪತಿ, ಸಹಾಯಕ ಇಂಜಿನಿಯರ್, ಇವರು ಈ ಹಿಂದೆ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ತೀರ್ಥಹಳ್ಳಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಉಗ್ರಾಣ ಸಾಮಾಗ್ರಿಗಳನ್ನು ಹಿಂದಿರುಗಿಸದೆ ರೂ. 23,375-00 ಗಳ ಸರ್ಕಾರಿ ಹಣವನ್ನು ದುರುಪಯೋಗಪಡಿಸಿಕೊಂಡಿದ್ದು ಹಾಗೂ ಕಛೇರಿಗೆ ರೂ. 24,37,152-00 ಗಳ ಟಿ.ಪಿ. ಲೆಕ್ಕವನ್ನು ಮತ್ತು ರೂ. 10,07,675-00ಗಳ ಎಂ.ಎ.ಎಸ್. ಲೆಕ್ಕವನ್ನು ಸಲ್ಲಿಸದೇ ಇರುವುದರಿಂದ ಸದರಿಯವರು ಸರ್ಕಾರಕ್ಕೆ ನಷ್ಟವನ್ನು ಉಂಟು ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವ ಕಾರಣ ಶ್ರೀ ಬಿ ಉಮಾಪತಿ, ಸಹಾಯಕ ಇಂಜಿನಿಯರ್ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ದೋಷಾರೋಪಣಾ ಪಟ್ಟಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಪ್ರಕರಣದಲ್ಲಿ ಅವ್ಯವಹಾರ ನಡೆದಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ ಹಾಗೂ ಈ ಅವ್ಯವಹಾರಕ್ಕೆ ಸಂಬಂಧಪಟ್ಟಂತೆ ಆಪಾದಿತರ ಮೇಲೆ ಶಿಸ್ತಿನ ನಡವಳಿಕೆಗಳನ್ನು ನಡೆಸಲು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂ (2) ರ ದಿ. 17.6.06ರಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4 ರೊಂದಿಗೆ ಜಾರಿ ಮಾಡಿದ್ದು, ಸದರಿ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿ ಮಾಡಿದ ಬಗ್ಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರು ಸರ್ಕಾರಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ. ಸದರಿ ನೋಟೀಸಿಗೆ ಶ್ರೀ ಬಿ. ಉಮಾಪತಿ, ಸಹಾಯಕ ಇಂಜಿನಿಯರ್ ಇವರು ಯಾವುದೇ ಲಿಖಿತ ಹೇಳಿಕೆಗಳನ್ನು ಸಲ್ಲಿಸಿರುವುದಿಲ್ಲ. ಆದುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶಗಳನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 15 ಇಎನ್‌ಕ್ಯೂ 06, ಬೆಂಗಳೂರು ದಿನಾಂಕ:26ನೇ ಅಕ್ಟೋಬರ್ 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಬಿ. ಉಮಾಪತಿ, ಅಂದಿನ ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ತೀರ್ಥಹಳ್ಳಿ ಇವರ ಮೇಲಿನ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗಧಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ನಿಯಮ 11(2)ರ ರೀತ್ಯ ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಸಹಾಯಕ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

ಈ ವಿಚಾರಣೆಯನ್ನು 3 ತಿಂಗಳೊಳಗಾಗಿ ನಡೆಸಿ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ನಿಗಧಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1600

ಸರ್ಕಾರದ ಅಧೀನ ಕಾರ್ಯದರ್ಶಿ, (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ :** ಪಂಚಾಯತ್‌ರಾಜ್ ಇಂಜಿನಿಯರಿಂಗ್ ವಿಭಾಗ, ಗುಲ್ಬರ್ಗಾ ಇಲ್ಲಿ ನಡೆದ ಅವ್ಯವಹಾರಗಳ ಬಗ್ಗೆ ಲೋಕಾಯುಕ್ತರ ವಿಚಾರಣೆ-ಅಂತಿಮ ಆದೇಶ.

**ಓದಲಾಗಿದೆ :**
1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಗುಲ್ಬರ್ಗಾ ಇವರ ಪತ್ರ ಸಂಖ್ಯೆ, ಜಿಪಗು:ಅಭಿ: ವಿಚಾರಣೆ: 31:96-97, ದಿನಾಂಕ:2.3.97.
2) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ 32 ಇಎನ್‌ಕ್ಯೂ 97, ದಿನಾಂಕ:18.11.97.
3) ಉಪ ಲೋಕಾಯುಕ್ತರ ಪತ್ರ ಸಂಖ್ಯೆ. COMPT: UPLOK:GLB-:175:97-98:ARE-4 ದಿನಾಂಕ 15.11.2000.
4) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ 32 ಇಎನ್‌ಕ್ಯೂ 97, ದಿನಾಂಕ:19.4.2001.
5) ಮಾನ್ಯ ಉಪ ಲೋಕಾಯುಕ್ತರ ವರದಿ ದಿನಾಂಕ: LOK:ARE-3:ENQ-1:2001-02 ದಿನಾಂಕ:24.8.2005.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ:2.3.97 ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಗುಲ್ಬರ್ಗಾ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ವ್ಯಾಪ್ತಿಯಲ್ಲಿ ಕೈಗೊಂಡ ಕೆಲಸ ಕಾರ್ಯಗಳಲ್ಲಿ ಅವ್ಯವಹಾರವಾಗಿದೆ ಎಂಬ ಬಗ್ಗೆ ತನಿಖೆ ನಡೆಸಿ ಸರ್ಕಾರಕ್ಕೆ ವರದಿಯನ್ನು ಕಳುಹಿಸಿ ಕೊಟ್ಟಿದ್ದರು. ಸದರಿ ತನಿಖಾ ವರದಿಯನ್ವಯ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಗುಲ್ಬರ್ಗಾ ಇಲ್ಲಿನ ಕೆಲ ಕಾಮಗಾರಿಗಳಲ್ಲಿ ಅವ್ಯವಹಾರವಾಗಿದೆ ಎಂದು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ, ಪ್ರಕರಣದಲ್ಲಿ ಇನ್ನೂ ವಿವರವಾದ ತನಿಖೆ ನಡೆಸುವ ಅಗತ್ಯತೆ ಇದೆ ಎಂದು ಸರ್ಕಾರವು ಮನಗಂಡು ಈ ಪ್ರಕರಣದಲ್ಲಿ ವಿವರವಾದ ತನಿಖೆ ನಡೆಸಿ ವರದಿ ಸಲ್ಲಿಸುವಂತೆ ಕರ್ನಾಟಕ ಲೋಕಯುಕ್ತ ಕಾಯ್ದೆ 1984 ಕಲಂ 7(2) (ಎ) ರನ್ವಯ ಮಾನ್ಯ ಉಪಲೋಕಾಯುಕ್ತರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ:18.11.97 ರ ಆದೇಶದಲ್ಲಿ ಕೋರಲಾಗಿತ್ತು.

ಮಾನ್ಯ ಉಪ ಲೋಕಾಯುಕ್ತರು ಪ್ರಕರಣದಲ್ಲಿ ಪ್ರಾರಂಭಿಕ ತನಿಖೆ ನಡೆಸಿ, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ರ ಕಲಂ 12(3)ರನ್ವಯ ನೀಡಿರುವ ವರದಿಯನ್ನು ಲೋಕಾಯುಕ್ತ ಕಛೇರಿಯ ನಿಬಂಧಕರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ:15.11.2000 ರ ತಮ್ಮ ಪತ್ರದೊಂದಿಗೆ ಕಳುಹಿಸುತ್ತಾ ಪ್ರಕರಣದಲ್ಲಿ ಮಾನ್ಯ ಉಪ ಲೋಕಾಯುಕ್ತರು ಮಾಡಿರುವ ಶಿಫಾರಸ್ಸುಗಳನ್ವಯ ಕ್ರಮ ಕೈಗೊಳ್ಳಬೇಕೆಂದು ಕೋರಿದ್ದರು.

ಮಾನ್ಯ ಉಪ ಲೋಕಾಯುಕ್ತರು ಪ್ರಕರಣದಲ್ಲಿ ತನಿಖೆ ನಡೆಸಿ ಸಲ್ಲಿಸಿದ ವರದಿಯನುಸಾರ ಪ್ರಕರಣದಲ್ಲಿ ಅವ್ಯವಹಾರ ಎಸೆಗಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮ 1957ರ ನಿಯಮ 11ರ ರೆಡ್‌ವಿಥ್ ನಿಯಮ 13ರಂತೆ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಮಗಳ ನಿಯಮ 14ಎ ರನ್ವಯ ಪ್ರಕಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲಾಗಿತ್ತು.

1. ಶ್ರೀ ಮಹಮ್ಮದ್ ಸಿರಾಜುದ್ದೀನ್, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪ ವಿಭಾಗ, ಚಿತ್ತಾಪೂರ.
2. ಶ್ರೀ ಹನುಮಂತರಾಯ, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪ ವಿಭಾಗ ಚಿತ್ತಾಪೂರ.
3. ಶ್ರೀ ಬಿ.ಎಸ್. ಐನಾಪುರ, ಅಂದಿನ ಕಿ.ಇಂ. ಪಂ.ರಾ.ಇಂ. ಉಪ ವಿಭಾಗ, ಚಿತ್ತಾಪೂರ.
4. ಶ್ರೀ ಎಂ. ವೀರಭದ್ರಯ್ಯ, ಅಂದಿನ ಸ.ಕಾ.ಇಂ. ಪಂ.ರಾ.ಇಂ. ಉಪವಿಭಾಗ, ಆಳಂದ.
5. ಶ್ರೀ ಅಣ್ಣಾರಾವ್ ಭೂರ್ಜಣೆ, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪ ವಿಭಾಗ, ಆಳಂದ.
6. ಶ್ರೀ ಸಿ.ವಿ. ಮಠ್, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪವಿಭಾಗ, ಆಳಂದ.
7. ಶ್ರೀ ಮೊಹಿನುದ್ದೀನ್ ಹಸನ್, ಅಂದಿನ ಸ.ಕಾ.ಇಂ., ಪಂ.ರಾ.ಇಂ., ಉಪ ವಿಭಾಗ, ಆಳಂದ.
8. ಶ್ರೀ ಎಸ್.ಜಿ. ರುದ್ರವಾಡಿ, ಅಂದಿನ ಸ.ಇಂ., ಪಂ.ರಾ.ಇಂ., ಉಪ ವಿಭಾಗ,ಆಳಂದ.
9. ಶ್ರೀ ರಾಮಕೃಷ್ಣ, ಅಂದಿನ ಕಿ.ಇಂ., ಪಂ.ರಾ.ಇಂ. ಉಪವಿಭಾಗ, ಚಿತ್ತಾಪೂರ.
10. ಶ್ರೀ ಬಿ. ಮಲ್ಲಿಕಾರ್ಜುನ್, ಅಂದಿನ ಕಾ. ಇಂ., ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ.
11. ಶ್ರೀ ಶಿವಣ್ಣ, ಅಂದಿನ ಲೆಕ್ಕಾಧೀಕ್ಷಕರು, ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ.
12. ಶ್ರೀ ಹಿರೇಮಠ್, ಅಂದಿನ ಉಗ್ರಾಣಾಧಿಕ್ಷಕ, ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ.
13. ಶ್ರೀ ಬಸವರಾಜ ಕೆ. ಟಕ್ಕಳಕಿ, ಅಂದಿನ ಕಿ.ಇಂ., ಪಂ.ರಾ.ಇಂ. ಉಪ ವಿಭಾಗ, ಚಿತ್ತಾಪೂರ.

ಮತ್ತು ಸದರಿ ಆದೇಶದಲ್ಲಿ ಶ್ರೀ ಜಿ. ಪುರಾಣಿಕ್, ಅಂದಿನ ಕಾ.ಇಂ, (ನಿವೃತ್ತ), ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ ಇವರ ವಿರುದ್ಧ ಕೆ.ಸಿ. ಎಸ್.ಆರ್. ನಿಯಮ 214ರಡಿ ಶಿಸ್ತಿನ ಕ್ರಮ ಜರುಗಿಸಲು ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಮಾನ್ಯ ಉಪ ಲೋಕಾಯುಕ್ತರು ಪ್ರಕರಣದಲ್ಲಿ ನಡೆಸಿದ ವಿವರವಾದ ಇಲಾಖಾ ವಿಚಾರಣೆ ವರದಿಯನ್ನು ಲಗತ್ತಿಸುತ್ತಾ, ಸದರಿ 14 ಮಂದಿ ಆರೋಪಿತ ಪೈಕಿ ಕೆಳಕಂಡ 6 ಮಂದಿ ಆರೋಪಿತರ ವಿರುದ್ಧ ಮಾಡಲಾದ ಆರೋಪಗಳು ಸಾಭೀತಾಗಿಲ್ಲವೆಂದು ತಿಳಿಸಿ ಅವರನ್ನು ಆರೋಪಗಳಿಂದ ಮುಕ್ತಿಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

1. ಶ್ರೀ ಮಹಮ್ಮದ್ ಸಿರಾಜುದ್ದೀನ್, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪ ವಿಭಾಗ ಚಿತ್ತಾಪೂರ.
2. ಶ್ರೀ ಹನುಮಂತರಾಯ, ಅಂದಿನ ಸ.ಕಾ.ಇಂ., ಉಪ ವಿಭಾಗ, ಚಿತ್ತಾಪೂರ.
3. ಶ್ರೀ ಎಂ. ವೀರಭದ್ರಯ್ಯ, ಅಂದಿನ ಸ.ಕಾ.ಇಂ. ಪಂ.ರಾ.ಇಂ. ಉಪ ವಿಭಾಗ, ಆಳಂದ.
4. ಶ್ರೀ ಮೊಹಿನುದ್ದೀನ್ ಹಸನ್, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪ ವಿಭಾಗ, ಆಳಂದ.
5. ಶ್ರೀ ಜಿ. ಪುರಾಣಿಕ್, ಅಂದಿನ ಕಾ.ಇಂ. (ನಿವೃತ್ತ), ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ.
6. ಶ್ರೀ ಬಿ. ಮಲ್ಲಿಕಾರ್ಜುನ್, ಅಂದಿನ ಕಾ.ಇಂ., ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ.

ಇನ್ನುಳಿದ ಈ ಕೆಳಕಂಡ ಅಧಿಕಾರಿ/ ನೌಕರರುಗಳ ವಿರುದ್ದದ ಆರೋಪಗಳು ಸಾಬೀತಾಗಿದ್ದು, ಸದರಿಯವರುಗಳಿಂದ ಉಂಟಾದ ನಷ್ಟದ ಮೊತ್ತವನ್ನು ವಸೂಲಿ ಮಾಡಲು ಮತ್ತು ದಂಡನೆ ವಿಧಿಸಲು ಮಾನ್ಯ ಉಪ ಲೋಕಾಯುಕ್ತರು ಶಿಫಾರಸ್ಸು ಮಾಡಿರುತ್ತಾರೆ.

1. ಶ್ರೀ ಬಿ.ಎಸ್. ಐನಾಪುರ, ಅಂದಿನ ಕಿ.ಇಂ. ಪಂ.ರಾ.ಇಂ. ಉಪ ವಿಭಾಗ, ಚಿತ್ತಾಪೂರ.

2. ಶ್ರೀ ಅಣ್ಣಾರಾವ್ ಭೂರ್ಜಣೆ, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪ ವಿಭಾಗ, ಆಳಂದ.
3. ಶ್ರೀ ಸಿ.ವಿ. ಮಠ್, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪವಿಭಾಗ, ಆಳಂದ.
4. ಶ್ರೀ ಎಸ್.ಜಿ. ರುದ್ರವಾಡಿ, ಅಂದಿನ ಸ.ಇಂ., ಪಂ.ರಾ.ಇಂ., ಉಪ ವಿಭಾಗ,ಆಳಂದ.
5. ಶ್ರೀ ರಾಮಕೃಷ್ಣ, ಅಂದಿನ ಕಿ.ಇಂ., ಪಂ.ರಾ.ಇಂ. ಉಪವಿಭಾಗ ಚಿತ್ತಾಪೂರ.
6. ಶ್ರೀ ಶಿವಣ್ಣ, ಅಂದಿನ ಲೆಕ್ಕಾಧೀಕ್ಷಕರು, ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ.
7. ಶ್ರೀ ಹಿರೇಮಠ್, ಅಂದಿನ ಉಗ್ರಾಣಾಧೀಕ್ಷಕ, ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ.
8. ಶ್ರೀ ಬಸವರಾಜ ಕೆ. ಟಕ್ಕಳಕಿ, ಅಂದಿನ ಕಿ.ಇಂ., ಪಂ.ರಾ.ಇಂ. ಉಪ ವಿಭಾಗ, ಚಿತ್ತಾಪೂರ.

ಸರ್ಕಾರವು ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಿದ ಅಪರ ನಿಬಂಧಕರು (ವಿಚಾರಣೆಗಳು-3) ಕರ್ನಾಟಕ ಲೋಕಾಯುಕ್ತ ಇವರ ವರದಿಯನ್ನು ಹಾಗೂ ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 8 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಪ್ರಕರಣದಲ್ಲಿ ಆರೋಪ ಸಾಬೀತಾದ ಈ ಕೆಳಕಂಡ ಅಧಿಕಾರಿ/ನೌಕರರುಗಳಿಂದ ಅವರುಗಳ ಹೆಸರಿನ ಮುಂದೆ ಸೂಚಿಸಿರುವಂತೆ ಸರ್ಕಾರಕ್ಕೆ ಉಂಟಾದ ನಷ್ಟದ ಮೊತ್ತವನ್ನು ವಸೂಲಿ ಮಾಡಲು ಮತ್ತು ದಂಡನೆಯನ್ನು ವಿಧಿಸಲು ಆದೇಶಿಸಿದೆ.

| ಕ್ರ. ಸಂ. | ಆರೋಪಿತರ ಹೆಸರು | ಆರೋಪಿತರಿಂದ ವಸೂಲಿ ಮಾಡ ಬೇಕಾದ ಮೊತ್ತ | ವಿಧಿಸಲಾದ ದಂಡನೆ. |
|---|---|---|---|
| 1 | ಶ್ರೀ ಬಿ.ಎಸ್. ಐನಾಪುರ,<br>ಅಂದಿನ ಕಿ.ಇಂ.<br>ಪಂ.ರಾ.ಇಂ. ಉಪ ವಿಭಾಗ, ಚಿತ್ತಾಪೂರ. | 1/ 3rd of Rs, 7,828-89 | ಒಂದು ವಾರ್ಷಿಕ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವುದು. |
| 2 | ಶ್ರೀ ಅಣ್ಣಾರಾವ್ ಭೂಅರ್ಜುಣೆ,<br>ಅಂದಿನ ಸ.ಕಾ.ಇಂ. ಪಂ.ರಾ.ಇಂ. ಉಪವಿಭಾಗ,<br>ಆಳಂದ. | 1/5th of Rs. 20,771-00<br>and<br>1/5th of Rs. 570-50 | ಒಂದು ವಾರ್ಷಿಕ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವುದು. |
| 3 | ಶ್ರೀ ಸಿ.ವಿ. ಮಠ್,<br>ಅಂದಿನ ಸ.ಕಾ.ಇಂ.<br>ಪಂ.ರಾ.ಇಂ. ಉಪ ವಿಭಾಗ, ಆಳಂದ. | 1/5th of Rs. 20,771-00<br>and<br>1/5th of Rs. 570-50 | ಒಂದು ವಾರ್ಷಿಕ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವುದು. |
| 4 | ಶ್ರೀ ಎಸ್.ಜಿ. ರುದ್ರವಾಡಿ,<br>ಅಂದಿನ ಸ.ಇಂ.,<br>ಪಂ.ರಾ.ಇಂ., ಉಪ ವಿಭಾಗ,ಆಳಂದ. | 1/5th of Rs. 20,771-00<br>and<br>1/5th of Rs. 570-50 | ಒಂದು ವಾರ್ಷಿಕ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವುದು. |
| 5 | ಶ್ರೀ ರಾಮಕೃಷ್ಣ,<br>ಅಂದಿನ ಕಿ.ಇಂ.,<br>ಪಂ.ರಾ.ಇಂ. ಉಪವಿಭಾಗ ಚಿತ್ತಾಪೂರ. | Nil | ಒಂದು ವಾರ್ಷಿಕ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವುದು. |
| 6 | ಶ್ರೀ ಶಿವಣ್ಣ,<br>ಅಂದಿನ ಲೆಕ್ಕಾಧೀಕ್ಷಕರು,<br>ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ. | Nil | ಒಂದು ವಾರ್ಷಿಕ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವುದು. |
| 7 | ಶ್ರೀ ಹಿರೇಮಠ್,<br>ಅಂದಿನ ಉಗ್ರಾಣಾಧೀಕ್ಷಕರು,<br>ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ. | Nil | ಒಂದು ವಾರ್ಷಿಕ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವುದು. |
| 8 | ಶ್ರೀ ಬಸವರಾಜ ಕೆ. ಟಕ್ಕಳಕಿ,<br>ಅಂದಿನ ಕಿ.ಇಂ.,<br>ಪಂ.ರಾ.ಇಂ. ಉಪ ವಿಭಾಗ, ಚಿತ್ತಾಪೂರ. | To recover Rs 1,954-44 | ಒಂದು ವಾರ್ಷಿಕ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವುದು. |

ಈ ಪ್ರಕರಣದಲ್ಲಿ ಆರೋಪ ಸಾಬೀತಾಗಿಲ್ಲದ ಈ ಕೆಳಕಂಡ ಅಧಿಕಾರಿ/ನೌಕರರುಗಳನ್ನು ಅವರುಗಳ ಮೇಲೆ ಹೊರಿಸಲಾದ ಆರೋಪಗಳಿಂದ ಮುಕ್ತಿಗೊಳಿಸಿ ಸಹ ಆದೇಶಿಸಿದೆ.

1. ಶ್ರೀ ಮಹಮ್ಮದ್ ಸಿರಾಜುದ್ದೀನ್, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪ ವಿಭಾಗ ಚಿತ್ತಾಪೂರ.
2. ಶ್ರೀ ಹನುಮಂತರಾಯ, ಅಂದಿನ ಸ.ಕಾ.ಇಂ., ಉಪ ವಿಭಾಗ, ಚಿತ್ತಾಪೂರ.
3. ಶ್ರೀ ಎಂ. ವೀರಭದ್ರಯ್ಯ, ಅಂದಿನ ಸ.ಕಾ.ಇಂ. ಪಂ.ರಾ.ಇಂ. ಉಪ ವಿಭಾಗ, ಆಳಂದ.
4. ಶ್ರೀ ಮೊಹಿನುದ್ದೀನ್ ಹಸನ್, ಅಂದಿನ ಸ.ಕಾ.ಇಂ., ಪಂ.ರಾ.ಇಂ. ಉಪ ವಿಭಾಗ, ಆಳಂದ.
5. ಶ್ರೀ ಜಿ. ಪುರಾಣಿಕ್, ಅಂದಿನ ಕಾ.ಇಂ. (ನಿವೃತ್ತ), ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ.
6. ಶ್ರೀ ಬಿ. ಮಲ್ಲಿಕಾರ್ಜುನ್, ಅಂದಿನ ಕಾ.ಇಂ., ಪಂ.ರಾ.ಇಂ. ವಿಭಾಗ, ಗುಲ್ಬರ್ಗಾ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1557

ಸರ್ಕಾರದ ಅಧೀನ ಕಾರ್ಯದರ್ಶಿ, (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## URBAN DEVELOPMENT SECRETARIAT

**Sub :** Constitution of a Committee for planned development of Bruhat Bangalore Mahanagara Palike- a Committee to study the organizational structures and staff requirements -reg

**Preamble:**

With the decision to constitute a Greater Bangalore Municipal Body (Bruhat Bangalore Mahanagara Palike) vide notification No UDD 92 MNY 2006, dated 2.11.2006, it has become necessary to constitute a committee to look into the issues relating to the organisational restructuring of the proposed Bruhat Bangalore Mahanagara Palike & staff requirments across different cadres as also subject matter specialists in different functional areas & propose modalities of recruitment based on requirements, bearing in mind the need to optimize utilization of existing resources & ensuring minimum additional recurring expenditure,.Hence this order.

**Order No. UDD86 MLR 2006 (2), Bangalore, Dated :4th September, 2006**

Government are pieased to constitute the following Committee to look into the issue regarding the organizational structures and staff requirements in the Bruhat Bangalore Mahanagare Palike.

1. Commissioner, Bangalore Mahanagare Palike : Chairman
2. Secretary to Government (MUDA) Urban Development Department : Member
3. Secretary to Government Finance Department (Expenditure) : Member
4. Secretary to Government D.P.A.R. : Member
5. Special Commissioner Bangalore Mahanagara Palike : Member Convenor

Commissioner, Bangalore Mahanagara Palike, Bangalore may co-opt such other members as he deems fit. The Committee to give its report by December 1 st 2006.

By Order and in the name of the Governor of Karnataka,

**B.G. WALI**

Under Secretary to Government,
Urban Development Department.

P.R. 1591

**Sub :** Constitution of a Infrastructure Development Committee for planned development of Bruhat Bangalore Mahanagara Palike-Rescures Mobilization -reg.

**Preamble:**

With the decision to constitute a Greater Bangalore Municipai Body (Brunat Bangalore Mahanagara Palike) vide notification No UDD 92 MNY 2006, dated 2.11.2006, it is necessary to constitute a committee to estimate the resources required for infrastucture development (road net work, water supply, UGD etc) in the proposed Bruhat Bangalore Mahanagara Palike area.

The Committee will take into account the ongoing programmes/ projects under different budgeted schemes of various organisations with Central/bilatoral/ multilatoral assistance and identify and pritorise the resource allocation across different infratructure sectors for the 11th plan period. Hence this order.

**Order No. UDD 86 MLR 2006 (1), Bangalore Dated: 4th September, 2006**

Government are Pleased to constitute the following infrastucture development Committee to assess the resource required for infrastucture development in the Bruhat Bangalore Mahanagara Palike area.

1. Additional Chief Secretary : Chairman
2. Principal Secretary to Government, Finance Department : Member
3. Principal Secretary to Government, Urban Development Department : Member
4. Secretary to Government, (M&UDA) Urban Development Department : Member
5. Secretary to Government, PWD : Member
6. Secretary, FD( Expenditure) : Member

7. Commissioner, BMP : Member
8. Commissioner, BDA : Member
9. Chairman, BWSSB : Member
10. Commissioner, BMRDA : Member
11. Directior, Municipal Administration : Member
12. Managing Director, KUIDFC : Member
13. Addl. Secrectary : Convenor
 Urban Development Department : Member

M/s CRISIL who are already engaged by KUIDFC to prepare a financial framework for UIBS will be asked to prepare the background papers and provide technical support to the Committee. The Committee to give its report by December 15th 2006.

By Order and in the name of the Governor of Karnataka,
**B.G. WALI**
Under Secretary to Government,
Urban Development Department.

P.R. 1592

**Sub :** Constitution of an Expert Committee for planned Development of Bruhat Bangalore Mahanagara Palike.

**Preamble:**

Bangalore has registered impressive economic and demographic growth particularly during the last two decades and has emerged as a leading metropolitan city of India. It has been hailed not only as the I.T. Capital of the Country, but also as a global technological hub. It houses many centers of excellence in Science, Engineering Medicine, Law and Management. Bangalore is also a major industrial center producing high quality electronic components, auto components, machine tools, garments etc. In recent years, Bangalore has also emerged as a center for specialized health care and high end research and design.

With the accelerated pace of urbanization, Bangalore has been experiencing constraints with respect to adequacy of infrastructure facilities as well as delivery of urban services which could seriously impinge upon its future growth and development. With the proposal to create Grater Bangalore Municipal Body initiated under G.O.No.UDD 92 MNY 06 dated 2.11.06 it has become necessary to design and develop a seamless effective and well coordinated management structure not only for the proposed Greater Bangalore Municipal Body but also for the entire Bangalore Metropolitan Region (BMR). The existing development and regulatory institutions need to be reviewed and restructured so as to define their relationship more meaningfully with reference to the Urban Local Bodies within BMR. There is also a need to consider a new framework for governance that would be faithful to the tenets of the 74th Constitution Amendment. Given the primacy of Bangalore in the economic development of Karnataka and rapid urbanization expected in the coming years in the peri urban areas constituting the metropolitan region, Government are of the view that a new comprehensive Legislation is essential that would deal with the development and regulation of the Bangalore Metropolitan Region. These issues and concerns need to be deliberated by a committee of experts who may submit recommendations to Government. Hence the following order.

**Order No. UDD 86 MLR 2006,(4)Bangalore Dated: 2nd September, 2006**

1. For the reasons and purpose cited in the preamble, Govenment are pleased to constitute an Expert Committee with the following members:

**Members:**

1. Dr. K.R. Kasturirangan, M.P — Chairman
 202/2, 19th Cross, 6th main, Malleswaram,
 Bangalore-560055
2. Dr. A. Ravindra — Member
 Former Chief Secretary,
 Government of Karnataka
 Deputy Chairman State Planning Board
 M.S. Buildings, Bangalore
3. Dr. Samuel Paul — Member
 Public Affairs Centre
 422, 80ft Road, VI Block, Koramangala,
 Bangalore-560095

4. Dr. Sadagopan, International Institute for Information Technology Bangalore (IIITB) 26/C, Opp Infosys I Gate, Electronic City, Hosur Road, Bangalore — Member
5. Sri Sivaramakrishanan IAS (Retd) 24 Aradhana Enclave, Scc-XIII, R.K. Puram, New Delhi-66 — Member

2. The broad terms of reference of the Expert Committee are as follows:

1) To review the administrative structures and legal framework currently operative within the BMR. This will involve an appraisal of the role and functional responsibilities of Urban Local Bodies and parastatals in the BMR.
2) The reorientation/ recorganization of the institutional frame work and,if necessary, recommend alternative models for efective governance having rgard to the tenets of the 74th Constitutional Amendment Bill.
3) With reference to the proposed creation of Greater Bangalore Municipal Body the Committee shall examine and suggest measures necessary to ensure effective governance within the newly expanded Local Body.
4) The Committee may refer to the recommendations of the Committee on Urban Management of Bangalore (1997) and suggest those which can be adopted with or without modifications.
5) To make recommendations regarding the structure of the new legal frame work for governance in the Bangalore metropolitan region which would cover all ULBs as also other organizations such as BDA, BMRDA, BWSSB etc. and spell out the coordination mechanisms and accountability of such bodies to the Urban Local Bodies in the BMR.

3. The Committee shall interact with the following Secretaries/Secretariat as also heads of Departments/Institutions Local Bodies during the course of their deliberations.

1) Principal Secretary Government, Finance Department
2) Principal Secretary Government, RD&PR
3) Principal Secretary Government, Transport Department
4) Principal Secretary Government, Home Department
5) Principal Secretary Government, Revenue Department
6) Principal Secretary Government, Housing Department
7) Secretary Government, Law Department
8) Secretary Government, Urban Development Department (M&U)
9) Commissioner, Bangalore Mahanagara Palike
10) Metropolitan Commissioner, BMRDA
11) Chairman Commissioner,BDA
12) Chairman, BWSSB
13) Managing Director, KUIDFC
14) Director of Municipal Administration

4. The Committee may also interact with such stakeholders who they consider desirable and relevant in the interest of fulfilling the aforesaid mandate.
5. The Principal Secretary, Urban Development Dept. will be the Convenor of the Committee.
6. Karnataka Urban Infrastructure Development Finance Corpoartion (KUIDFC) will provide requisite secretariat assistance to the Committee.
7. The Expert Committee shall submit its recommendations within a period of 8 weeks.
8. Separate instructions will issue regarding TA/sitting fees in a accordance with relevant rules.

By Order and in the name of the Governor of Karnataka,

**B.G. WALI**

Under Secretary to Government,
Urban Development Department.

P.R. 1604

## ಆರ್ಥಿಕ ಸಚಿವಾಲಯ

**ವಿಷಯ:** 2007–2008ರ ಸಾಲಿನ ಎರಡು ವರ್ಷಗಳ ಬ್ಲಾಕ್ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗಧೀಕರಣ ಸೌಲಭ್ಯವನ್ನು ನಿಯತಗೊಳಿಸುವ ಬಗ್ಗೆ.

**ಪ್ರಸ್ತಾವನೆ:**

ದಿನಾಂಕ: 1.1.2007 ರಿಂದ 31.12.2008ರ ವರೆಗಿನ ಎರಡು ವರ್ಷಗಳ ಬ್ಲಾಕ್ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗಧೀಕರಣ ಸೌಲಭ್ಯ ಪಡೆಯುವುದನ್ನು ನಿಯತಗೊಳಿಸುವುದು ಅವಶ್ಯಕವೆಂದು ಸರ್ಕಾರವು ಈ ಬಗ್ಗೆ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆಇ 8 ಸೇನಿಸೇ 2006, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2006**

2007–2008ರ ಎರಡು ವರ್ಷಗಳ ಬ್ಲಾಕ್ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಣ ಮಾಡಿ ನಗದೀಕರಣ ಸೌಲಭ್ಯ ಪಡೆಯುವ ಯೋಜನೆಯನ್ನು ದಿನಾಂಕ: 1.1.2007 ರಿಂದ ಜಾರಿಗೊಳಿಸಿ, ಈ ಕೆಳಕಂಡಂತೆ ನಿಯತಗೊಳಿಸಲಾಗಿದೆ.

2. 2007–2008ರ ಎರಡು ವರ್ಷಗಳ ಬ್ಲಾಕ್ ಅವಧಿಗೆ ತಮ್ಮ ಗಳಿಕೆಯ ರಜೆಯನ್ನು ಅಧ್ಯರ್ಪಿಸಿ ಅದಕ್ಕೆ ಬದಲಾಗಿ ನಗದನ್ನು ಪಡೆಯಲಿಚ್ಛಿಸುವ ಈ ಕೆಳಕಂಡ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ನೌಕರರು, ಅವರು ಅರ್ಜಿ ಸಲ್ಲಿಸಿದ ದಿನಾಂಕದಿಂದ ಒಂದು ತಿಂಗಳ ತರುವಾಯ ಅಥವಾ ಅವರ ವೇತನ ಶ್ರೇಣಿಯ ಮುಂದೆ ಸೂಚಿಸಿರುವ ತಿಂಗಳಿನಲ್ಲಿ, ಯಾವುದು ನಂತರ ಬರುವುದೋ ಆ ತಿಂಗಳಲ್ಲಿ ನಗಧೀಕರಣ ಪ್ರಯೋಜನ ಪಡೆಯಲು ಅರ್ಹರಾಗಿರುತ್ತಾರೆ.

| ಕ್ರಮ ಸಂಖ್ಯೆ | ವೇತನ ಶ್ರೇಣಿ ರೂ. | ಮುಂಚಿತವಾಗಿ ಒಂದು ತಿಂಗಳ ನೋಟೀಸ್ ನೀಡಿ 2007–2008ರ ಬ್ಲಾಕ್ ಅವಧಿಗೆ ನಗದೀಕರಣ ಸೌಲಭ್ಯ ಪಡೆಯುವ ತಿಂಗಳು |
|---|---|---|
| 1 | 2 | 3 |
| 1 | 2500–3850 | ಜನವರಿ 2007 |
| 2 | 2600–4350 | ಫೆಬ್ರವರಿ 2007 |
| 3 | 2775–4950 | ಮಾರ್ಚ್ 2007 |
| 4 | 3000–5450 | ಏಪ್ರಿಲ್ 2007 |
| 5 | 3300–6300 | ಮೇ 2007 |
| 6 | 3850–7050 | ಜೂನ್ 2007 |
| 7 | 4150–7800 | ಜುಲೈ 2007 |
| 8 | 4575–8400 | ಆಗಸ್ಟ್ 2007 |
| 9 | 5200–9580 | ಸೆಪ್ಟೆಂಬರ್ 2007 |
| 10 | 5575–10620 | ಅಕ್ಟೋಬರ್ 2007 |
| 11 | 6000–11200 | ನವೆಂಬರ್ 2007 |
| 12 | 6300–11840 ಮತ್ತು ಮೇಲ್ಪಟ್ಟ ವೇತನ ಶ್ರೇಣಿಗಳು | ಡಿಸೆಂಬರ್ 2007 |

3. ಆದಾಗ್ಯೂ ಕಂಡಿಕೆ 2 ರಲ್ಲಿ ತಿಳಿಸಿರುವುದು ಏನೇ ಇದ್ದಾಗ್ಯೂ ಈ ಬ್ಲಾಕ್ ಅವಧಿಯಲ್ಲಿ ಗಳಿಕೆ ರಜೆಯನ್ನು ಬಿಟ್ಟುಕೊಡುವ ಮತ್ತು ನಗಧೀಕರಣ ಸೌಲಭ್ಯವನ್ನು ಪಡೆಯಲು ಅರ್ಹರಿದ್ದು ಸದರಿ ಅವಧಿಯಲ್ಲಿ ನಿವೃತ್ತಿ ಹೊಂದುವ ಸರ್ಕಾರಿ ನೌಕರರು ಎರಡನೇ ಕಂಡಿಕೆಯ ಕೋಷ್ಟಕದಲ್ಲಿ ಅವರ ವೇತನ ಶ್ರೇಣಿಯ ಮುಂದೆ ಸೂಚಿಸಿರುವ ತಿಂಗಳಲ್ಲಿ ಅಥವಾ ಅವರ ಸೇವೆಯ ಕೊನೆಯ ತಿಂಗಳಲ್ಲಿ ಇದರಲ್ಲಿ ಯಾವುದು ಮೊದಲೋ ಆ ತಿಂಗಳಲ್ಲಿ ನಗಧೀಕರಣ ಪ್ರಯೋಜನ ಪಡೆಯಲು ಅರ್ಹರಾಗಿರುತ್ತಾರೆ.

4. ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗಧೀಕರಣಕ್ಕಾಗಿ ನಿರ್ದಿಷ್ಟಪಡಿಸಿದ ತಿಂಗಳಿಗಿಂತ ಪೂರ್ವದಲ್ಲಿ ಯಾವ ಸರ್ಕಾರಿ ನೌಕರನ ಗಳಿಕೆ ರಜೆಯ ಲೆಕ್ಕದಲ್ಲಿ ಗರಿಷ್ಠ ಮೊತ್ತದ 240 ದಿನಗಳು ಮೀರುತ್ತದೆಯೋ ಅಂತಹ ಪ್ರಕರಣಗಳಲ್ಲಿ ಮೇಲಿನ ಕಂಡಿಕೆ (2) ರಲ್ಲಿನ ಕೋಷ್ಠಕದಲ್ಲಿ ನಮೂದಿಸಿರುವ ತಿಂಗಳಿನ ಬದಲಾಗಿ, ಗರಿಷ್ಠ ಮೊತ್ತದ 240 ದಿನಗಳ ಗಳಿಕೆ ರಜೆ ಮೀರುವ ತಿಂಗಳಿನ ತಕ್ಷಣದ ಹಿಂದಿನ ತಿಂಗಳಿನಲ್ಲಿ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗಧೀಕರಿಸಲು ಅನುಮತಿಸಲಾಗಿದ್ದು, ಸಂಬಂಧಪಟ್ಟ ವರ್ಷದ ಬ್ಲಾಕ್ ಅವಧಿಯ ಜೂನ್ ತಿಂಗಳ ಕೊನೆಯಲ್ಲಿ (ನ್ಯಾಯಾಂಗ ಇಲಾಖೆಯ ಸಿಬ್ಬಂದಿವರ್ಗದವರಿಗೆ ಸಂಬಂಧಿಸಿದಂತೆ ಮೇ ತಿಂಗಳ ಕೊನೆಯಲ್ಲಿ) ಅಥವಾ ಡಿಸೆಂಬರ್ ತಿಂಗಳ ಕೊನೆಯಲ್ಲಿ ಅಂದರೆ ಜೂನ್ 2007, ಡಿಸೆಂಬರ್ 2007ರ ಕೊನೆಯಲ್ಲಿ ಪಡೆಯಲು ಅರ್ಹರಾಗಿರುತ್ತಾರೆ. ದಿನಾಂಕ: 31.5.2007 ರಂದು ಅಥವಾ ಅದಕ್ಕೆ ಮೊದಲು ಅರ್ಜಿ ಸಲ್ಲಿಸಿರುವ ನ್ಯಾಯಾಂಗ ಇಲಾಖೆಯ ನೌಕರರ ಲೆಕ್ಕದಲ್ಲಿ ದಿನಾಂಕ: 1.6.2007 ರಂದು 240 ದಿನಗಳಿಗಿಂತ ಹೆಚ್ಚು ಗಳಿಕೆ ರಜೆ ಮೀರುವ ಸಂದರ್ಭದಲ್ಲಿ ಮಾತ್ರ ಈ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ ಈ ಅವಕಾಶದಿಂದಾಗಿ ಗಳಿಕೆ ರಜೆ ನಗದೀಕರಣ ಸೌಲಭ್ಯವು ಒಂದು ಬ್ಲಾಕ್ ಅವಧಿಗೆ ಸೀಮಿತಗೊಳಿಸಿರುವ 30 ದಿನಗಳ ಗರಿಷ್ಠ ಮಿತಿಯನ್ನು ಆಯಾ ಬ್ಲಾಕ್ ಅವಧಿಯಲ್ಲಿ ಯಾವುದೇ ಕಾರಣಕ್ಕೂ ಮೀರತಕ್ಕದ್ದಲ್ಲ. ಅಂದರೆ ಎರಡು ವರ್ಷಗಳ ಬ್ಲಾಕ್ ಅವಧಿಯಲ್ಲಿ ಒಮ್ಮೆ ಮಾತ್ರ ಗರಿಷ್ಠ 30 ದಿನಗಳ ಗಳಿಕೆ ರಜೆ ನಗದೀಕರಣ ಪಡೆಯಲು ಅವಕಾಶವಿರುತ್ತದೆ.

5. ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 118 ರಲ್ಲಿ ನಿಯಮಿಸಿರುವಂತಹ ಗಳಿಕೆ ರಜೆ ನಗದೀಕರಣ ನಿಯಂತ್ರಣಕ್ಕೆ ಸಂಬಂಧಿಸಿದ ಇತರೆ ಷರತ್ತುಗಳು ಅನ್ವಯವಾಗುತ್ತದೆ.

6. ಈ ಆದೇಶವು ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಸಂಸ್ಥೆಗಳ ನೌಕರರಿಗೂ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ನಾರಾಯಣ**

ಪಿ.ಆರ್. 1777

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ, (ಸೇವೆಗಳು–1).

**ವಿಷಯ:** ಕರ್ನಾಟಕ 5ನೇ ರಾಜ್ಯ ವೇತನ ಆಯೋಗದ ರಚನೆ ಆಯೋಗದ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003, ದಿನಾಂಕ: 21.6.2005.

2) ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003, ದಿನಾಂಕ: 28.7.2005.

3) ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003, ದಿನಾಂಕ: 03.08.2006.

4) ಕಾರ್ಯದರ್ಶಿ, ಕರ್ನಾಟಕ 5ನೇ ರಾಜ್ಯ ವೇತನ ಆಯೋಗ ಇವರ ಅರೆಸರ್ಕಾರಿ ಪತ್ರ ಸಂಖ್ಯೆ: ಎಸ್‌ಪಿಸಿ/ಎಡಿಎಂಎನ್/2006, ದಿನಾಂಕ: 22.11.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 21.6.2005ರ ಆದೇಶದಲ್ಲಿ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಲು ಮತ್ತು ನೂತನ ವೇತನ ರಚನೆ ಇತ್ಯಾದಿಗಳನ್ನು ರೂಪಿಸಲು ಸಿ.ಗೋಪಾಲ ರೆಡ್ಡಿ, ನಿವೃತ್ತ ಕೇಂದ್ರ ಸರ್ಕಾರದ ಕಾರ್ಯದರ್ಶಿಗಳು ಇವರ ಅಧ್ಯಕ್ಷತೆಯಲ್ಲಿ ಏಕ ಸದಸ್ಯ 5ನೇ ರಾಜ್ಯ ವೇತನ ಆಯೋಗವನ್ನು ರಚಿಸಿ, ಮೇಲೆ (2) ರಲ್ಲಿ ಓದಲಾದ ದಿನಾಂಕ: 28.7.2005ರ ಸರ್ಕಾರದ ಆದೇಶದಲ್ಲಿ, ಸದರಿ ಆಯೋಗದಲ್ಲಿ 40 ವಿವಿಧ ವರ್ಗದ ಹುದ್ದೆಗಳನ್ನು ಸೃಜಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 03.08.2006ರ ಆದೇಶದಲ್ಲಿ ಶ್ರೀ ಎಂ.ಬಿ.ಪ್ರಕಾಶ್, ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರನ್ನು ಸಿ.ಗೋಪಾಲ ರೆಡ್ಡಿ, ಇವರ ನಿಧನದಿಂದ ತೆರವಾದ ಸ್ಥಾನದಲ್ಲಿ, ಏಕ ಸದಸ್ಯ 5ನೇ ರಾಜ್ಯ ವೇತನ ಆಯೋಗದ ಅಧ್ಯಕ್ಷರನ್ನಾಗಿ ನೇಮಕ ಮಾಡಿ, ಆಯೋಗವು ತನ್ನ ವರದಿಯನ್ನು ದಿನಾಂಕ: 31.12.2006 ರಂದು ಅಥವಾ ಅದಕ್ಕಿಂತ ಮುಂಚಿತವಾಗಿ ಸಲ್ಲಿಸುವಂತೆ ತಿಳಿಸಲಾಗಿತ್ತು.

ಮೇಲೆ (4) ರಲ್ಲಿ ಓದಲಾದ ದಿನಾಂಕ: 22.11.2006ರ ಪತ್ರದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ 5ನೇ ರಾಜ್ಯ ವೇತನ ಆಯೋಗ ಇವರು ಆಯೋಗವು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಮತ್ತು ಆಯೋಗದ ಇತರ ಕಾರ್ಯಕಲಾಪಗಳನ್ನು ಸಮಾಪನಗೊಳಿಸಲು ದಿನಾಂಕ: 30.4.2007ರ ವರೆಗೆ ಆಯೋಗದ ಅವಧಿಯನ್ನು ವಿಸ್ತರಿಸಲು ಹಾಗೂ ಆಯೋಗಕ್ಕೆ ಮಂಜೂರಾದ ಹುದ್ದೆಗಳ ಅವಧಿಯನ್ನೂ ಸಹ ದಿನಾಂಕ: 30.04.2007 ರವರೆಗೆ ವಿಸ್ತರಿಸಲು ಸರ್ಕಾರವನ್ನು ಕೋರಿದ್ದಾರೆ. ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ 5ನೇ ರಾಜ್ಯ ವೇತನ ಆಯೋಗವು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಮತ್ತು ಆಯೋಗದ ಇತರ ಕಾರ್ಯಕಲಾಪಗಳನ್ನು ಸಮಾಪನಗೊಳಿಸಲು ಅನುಕೂಲವಾಗುವಂತೆ ಆಯೋಗದ ಅವಧಿಯನ್ನು ದಿನಾಂಕ: 30.04.2007ರ ವರೆಗೆ ವಿಸ್ತರಿಸಲು ಹಾಗೂ ಆಯೋಗಕ್ಕೆ ಮಂಜೂರಾದ ಎಲ್ಲಾ ಹುದ್ದೆಗಳ ಅವಧಿಯನ್ನು ದಿನಾಂಕ: 30.04.2007ರ ವರೆಗೆ ವಿಸ್ತರಿಸಲು ಸರ್ಕಾರವು ಹರ್ಷಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಪಿ.ಆರ್. 02

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2).

**ಕಂದಾಯ ಸಚಿವಾಲಯ**

**ವಿಷಯ:** ಲೆಕ್ಕ ಶೀರ್ಷಿಕೆ 2029 ರಡಿಯಲ್ಲಿ 2006–07ನೇ ಸಾಲಿಗೆ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 01 ಬಿಎಸ್‌ಸಿ 2005, ದಿನಾಂಕ: 18.12.2006.

2) ಸರ್ಕಾರದ ಅ.ಟಿ.ಸಂ. ಕಂಇ 15 ಎ.ಯು.ಡಿ.2006, ದಿನಾಂಕ: 21.12.2006.

3) ಸರ್ಕಾರದ ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಎಫ್‌ಡಿ 360 ಬಿಆರ್.ಎಸ್. 2006, ದಿನಾಂಕ: 11.12.2006.

**ಪ್ರಸ್ತಾವನೆ:**

ಉಲ್ಲೇಖ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯದ ಕಂದಾಯ ಇಲಾಖೆಯಲ್ಲಿರುವ ಮಿತ ವೇತನ ಗ್ರಾಮ ಸಹಾಯಕರ ಹುದ್ದೆಗಳನ್ನು ದಿನಾಂಕ: 1.7.2006 ರಿಂದ 31.3.2007 ರವರೆಗೆ ಮುಂದುವರೆಸಿ ಆದೇಶಿಸಲಾಗಿದೆ. ಸದರಿ ಆದೇಶದಲ್ಲಿ ಗ್ರಾಮ ಸಹಾಯಕರುಗಳಿಗೆ ಮಿತ ವೇತನವನ್ನು ಬಿಡುಗಡೆ ಮಾಡಲು ಲೆಕ್ಕ ಶೀರ್ಷಿಕೆ 2029–00–101–1–01–015 ರಡಿಯಲ್ಲಿ ಹೆಚ್ಚುವರಿ ಅನುದಾನ ರೂ.1475.00 ಲಕ್ಷಗಳು ಲಭ್ಯವಿರುವುದಾಗಿ ಹೇಳಿದ್ದು, ಅದನ್ನು ರಾಜ್ಯದ ಕಂದಾಯ

ಇಲಾಖೆಯಲ್ಲಿ ಮಿತ ವೇತನ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿರುವ 9607 ಗ್ರಾಮ ಸಹಾಕರುಗಳಿಗೆ ದಿನಾಂಕ: 31.3.2007 ರವರೆಗೆ ಮಿತವೇತನವನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸಿದೆ.

ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ 2006-07ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಲ್ಲಿ 27.40 ಲಕ್ಷ ರೂ.ಗಳ ಅನುದಾನ ಉಳಿದಿದ್ದು, ಹಾಲಿ ಒದಗಿಸಿರುವ ಹೆಚ್ಚುವರಿ ಅನುದಾನ ಸೇರಿ ಒಟ್ಟು 1502.40 ಲಕ್ಷ ರೂ.ಗಳ ಅನುದಾನ ಲಭ್ಯವಿರುವುದಾಗಿ ತಿಳಿಸಿ, ಲಗತ್ತಿಸಿರುವ ಅನುಬಂಧದಂತೆ 148974500/- ರೂ.ಗಳನ್ನು ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಹಿರಿಯ ಲೆಕ್ಕಾ ಪರಿಶೋಧನಾಧಿಕಾರಿ, ಕಂದಾಯ ಇಲಾಖೆ ಇವರು ತಿಳಿಸಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 19 ಎಂಎಸ್‌ಟಿ 2006, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಮೇರೆಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಕಾಣಿಸಿರುವಂತೆ ರಾಜ್ಯದ ಕಂದಾಯ ಇಲಾಖೆಯಲ್ಲಿ ಮಿತ ವೇತನ (ಸ್ಟೈಫೆಂಡರಿ) ಗ್ರಾಮ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿರುವ 9607 ಗ್ರಾಮ ಸಹಾಯಕರುಗಳಿಗೆ ದಿನಾಂಕ: 1.8.2006 ರಿಂದ ದಿನಾಂಕ: 31.3.2007 ರವರೆಗೆ ಮಾಸಿಕ ಸಂಭಾವನೆ ತಲಾ 2000/- ರೂ. ನಂತೆ ಪಾವತಿಸಲು ಒಟ್ಟು ರೂ.148974500/- ಗಳನ್ನು (ರೂಪಾಯಿ ಹದಿನಾಲ್ಕು ಕೋಟಿ ತೊಂಭತ್ತ ಒಂಭತ್ತು ಲಕ್ಷದ ಎಪ್ಪತ್ತ ನಾಲ್ಕು ಸಾವಿರದ ಐದುನೂರು ಮಾತ್ರ) ಎಲ್ಲಾ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2029-00-101-1-01-015 ಪೂರಕ ವೆಚ್ಚಗಳ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 360 ಬಿ.ಆರ್‌ಎಸ್ 2006, ದಿನಾಂಕ: 11.12.2006 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಎಸ್. ಗುರುಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಸು.ಕೋ.).

**ಆದೇಶ ಸಂಖ್ಯೆ: ಕಂಇ 19 ಎಂಎಸ್‌ಟಿ 2006, ದಿನಾಂಕ: 21.12.2006ಕ್ಕೆ ಅನುಬಂಧ**

**ಗ್ರಾಮ ಸಹಾಯಕರುಗಳಿಗೆ ಮಾಸಿಕ 2000/- ರೂ.ನಂತೆ 01.08.2006 ರಿಂದ 31.03.2007ರ ವರೆವಿಗೆ ಬಿಡುಗಡೆ ಮಾಡಿರುವ ಅನುದಾನದ ವಿವರಗಳು**

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿರುವ ಅನುದಾನ (ರೂ.ಗಳಲ್ಲಿ) |
|---|---|---|
| 1 | ಬೆಂಗಳೂರು ನಗರ | 3089500 |
| 2 | ಬೆಂಗಳೂರು ಗ್ರಾಮಾಂತರ | 6784000 |
| 3 | ಬೆಳಗಾವಿ | 10000000 |
| 4 | ಬಳ್ಳಾರಿ | 6434000 |
| 5 | ಬೀದರ್ | 5600000 |
| 6 | ಬಿಜಾಪುರ | 5400000 |
| 7 | ಬಾಗಲಕೋಟೆ | 5500000 |
| 8 | ಚಿಕ್ಕಮಗಳೂರು | 3541500 |
| 9 | ಚಿತ್ರದುರ್ಗ | 5583000 |
| 10 | ಚಾಮರಾಜನಗರ | 3796500 |
| 11 | ದಕ್ಷಿಣ ಕನ್ನಡ | 5466500 |
| 12 | ಧಾರವಾಡ | 3463500 |
| 13 | ದಾವಣಗೆರೆ | 4681000 |
| 14 | ಗುಲ್ಬರ್ಗಾ | 10000000 |
| 15 | ಗದಗ | 3100500 |
| 16 | ಹಾಸನ | 7103000 |
| 17 | ಹಾವೇರಿ | 5923500 |
| 18 | ಕೊಡಗು | 2142000 |
| 19 | ಕೋಲಾರ | 8000000 |
| 20 | ಕೊಪ್ಪಳ | 3441500 |
| 21 | ಮಂಡ್ಯ | 7922500 |
| 22 | ಮೈಸೂರು | 7232500 |
| 23 | ರಾಯಚೂರು | 5300000 |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿರುವ ಅನುದಾನ (ರೂ.ಗಳಲ್ಲಿ) |
|---|---|---|
| 24 | ಶಿವಮೊಗ್ಗ | 2552500 |
| 25 | ತುಮಕೂರು | 10000000 |
| 26 | ಉತ್ತರ ಕನ್ನಡ | 5041000 |
| 27 | ಉಡುಪಿ | 1876000 |
| | **ಒಟ್ಟು** | **148974500** |

**ಜಿ.ಎಸ್. ಗುರುಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಸು.ಕೋ.).

ಪಿ.ಆರ್. 1815

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಜಲ ಸಂಪನ್ಮೂಲ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಭಾರಿ ಅಣೆಕಟ್ಟುಗಳ ತಪಾಸಣೆಯನ್ನು ಕೈಗೊಳ್ಳಲು ಆಂತರಿಕ ಅಣೆಕಟ್ಟು ಸುರಕ್ಷತಾ ಪರಿಶೀಲನಾ ತಂಡಗ್‌ಳನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ನೀ:55:ಕಾವಿಇ:99 (ಭಾ-1) ಬೆಂಗಳೂರು, ದಿನಾಂಕ: 13.09.2000.
2) ನಿರ್ದೇಶಕರು, ಗಣಿಮತ್ತು ಭೂವಿಜ್ಞಾನ ಇಲಾಖೆ ರವರ ಪತ್ರ ಸಂಖ್ಯೆ: ಗಭೂಇ:ಅಜವಿ:ಇತರೆ:06–07: 939 ದಿ: 21–6–06
3) ಅ.ಅ. ಉ ಮತ್ತು ಮೌ, ಬೆಂಗಳೂರು ರವರ ಪತ್ರ ಸಂಖ್ಯೆ: ಅಅ:ಮಾ ಮತ್ತು ಇ: ಅಪಸ:ಎಇ–5:06–07: 500 ದಿ:24–7–06
4) ನಿರ್ದೇಶಕರು, ಗಣಿಮತ್ತು ಭೂವಿಜ್ಞಾನ ಇಲಾಖೆ ರವರ ಪತ್ರ ಸಂಖ್ಯೆ: ಗಭೂಇ:ಅಜವಿ:06 07:185 ದಿ: 26–09–06
5) ಡಾ. ವೈ.ಕೆ. ಮೂರ್ತಿ, ಅಧ್ಯಕ್ಷರು, ಕರ್ನಾಟಕ ರಾಜ್ಯ ಅಣೆಕಟ್ಟು ಸುರಕ್ಷತಾ ಸಮಿತಿ, ರವರ ಪತ್ರ ದಿನಾಂಕ: 7–7–06.
6) ಡಾ. ವೈ.ಕೆ. ಮೂರ್ತಿ, ಅಧ್ಯಕ್ಷರು, ಕರ್ನಾಟಕ ರಾಜ್ಯ ಅಣೆಕಟ್ಟು ಸುರಕ್ಷತಾ ಸಮಿತಿ, ರವರ ಪತ್ರ ದಿನಾಂಕ: 9–9–06.
7) ಅ.ಅ. ಉ ಮತ್ತು ಮೌ, ಬೆಂಗಳೂರು ರವರ ಪತ್ರ ಸಂಖ್ಯೆ: SE/M&E/AE-7/Re-Org.DSRP/ 06-07/656 Dt: 12–09–06

**ಪ್ರಸ್ತಾವನೆ:**

ಕೇಂದ್ರ ಜಲ ಆಯೋಗದ ಅಣೆಕಟ್ಟು ಸುರಕ್ಷಣಾ ಕಾರ್ಯ ವಿಧಾನದ ವರದಿಯ ಅನುಸಾರ ರಾಜ್ಯದಲ್ಲಿನ 15 ಮೀಟರ್‌ಗಿಂತ ಎತ್ತರವಿರುವ ಅಣೆಕಟ್ಟುಗಳ ಅಥವಾ 60 ಮಿಲಿಯನ್ ಘನ ಮೀಟರಿಗಿಂತ ಹೆಚ್ಚು ನೀರನ್ನು ಶೇಖರಿಸುವ ಸಾಮರ್ಥ್ಯ ಹೊಂದಿರುವ ಅಣೆಕಟ್ಟುಗಳ ಸುರಕ್ಷತೆಯನ್ನು 10 ವರ್ಷಗಳಿಗೊಂದು ಬಾರಿ ಪರಿಶೀಲಿಸುವ ಸಲುವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶದಲ್ಲಿ ಡಾ।। ವೈ.ಕೆ.ಮೂರ್ತಿ, ಮಾಜಿ ಅಧ್ಯಕ್ಷರು, ಕೇಂದ್ರ ಜಲ ಆಯೋಗ ಇವರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯನ್ನು ರಚಿಸಲಾಗಿದೆ. ಆದರೆ, ಸದರಿ ತಜ್ಞರ ಸಮಿತಿಯಿಂದ ರಾಜ್ಯದಲ್ಲಿನ ಎಲ್ಲಾ ಭಾರಿ ಅಣೆಕಟ್ಟುಗಳನ್ನು ನಿಗದಿತ ಅವಧಿಯೊಳಗೆ ಪರಿಶೀಲಿಸಲು ಸಾಧ್ಯವಾಗದಿರುವ ಹಿನ್ನೆಲೆಯಲ್ಲಿ ಡಾ।। ವೈ.ಕೆ.ಮೂರ್ತಿರವರು ರಾಜ್ಯದಲ್ಲಿನ ಜಲ ಸಂಪನ್ಮೂಲ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಭಾರಿ ಅಣೆಕಟ್ಟುಗಳನ್ನು ಪರಿಶೀಲಿಸಲು ಶ್ರೀ ಎಸ್. ಬಿ. ಕೊಯಮತ್ತೂರ್, ನಿವೃತ್ತ ಅಧೀಕ್ಷಕ ಅಭಿಯಂತರವರ ನೇತೃತ್ವದಲ್ಲಿ ಎರಡು ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ತಂಡವನ್ನು ರಚಿಸಬೇಕೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (5) ಹಾಗೂ (6) ರಲ್ಲಿ ಸಲಹೆ ನೀಡಿರುತ್ತಾರೆ. ಹಾಗೂ, ಸದರಿ ತಂಡಗಳು ಸಲ್ಲಿಸುವ ಪರಿವೀಕ್ಷಣಾ ವರದಿಗಳನ್ನು ಡಿ.ಎಸ್.ಆರ್.ಪಿ.ಯು ಪರಿಶೀಲಿಸಿ ಗಂಭೀರತೆ ಇರುವ ಅಂಶಗಳನ್ನು ಗುರುತಿಸಿ ಸರ್ಕಾರಕ್ಕೆ ಅಂತಿಮ ಶಿಫಾರಸ್ಸುಗಳನ್ನು ಸಲ್ಲಿಸುವುದಾಗಿ ಸೂಚಿಸಿರುತ್ತಾರೆ.

2. ಮುಂದುವರೆದು, ಮೇಲೆ ಓದಲಾದ ಕ್ರಮ ಸಂಖ್ಯೆ (2) ಹಾಗೂ (4)ರಲ್ಲಿ ನಿರ್ದೇಶಕರು, ಗಣಿಮತ್ತು ಭೂವಿಜ್ಞಾನ ಇಲಾಖೆ ರವರು, ಸದರಿ ತಂಡಗಳಲ್ಲಿ 'Engineering Geology - Dam Foundation' ಕಾರ್ಯಕ್ಷೇತ್ರವನ್ನು ಪ್ರತಿನಿಧಿಸಲು, ಶ್ರೀ.ಆರ್.ಜಿ.ಭಟ್ ಉಪ ಮುಖ್ಯ ಭೂ ಭೌತ ತಜ್ಞರು, ಮತ್ತು ಡಾ: ಬಿ.ಎಂ. ರವೀಂದ್ರ, ಹಿರಿಯ ಭೂ ವಿಜ್ಞಾನಿ, ಗಣಿಮತ್ತು ಭೂವಿಜ್ಞಾನ ಇಲಾಖೆ ಇವರ ನಾಮನಿರ್ದೇಶನವನ್ನು ಸಲ್ಲಿಸಿರುತ್ತಾರೆ

3. ಹಾಗೂ, ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಅಧೀಕ್ಷಕ ಅಭಿಯಂತರರು, ಉಸ್ತುವಾರಿ ಮತ್ತು ಮೌಲ್ಯಮಾಪನ ರವರು 'Gates & Hoists' ಕಾರ್ಯಕ್ಷೇತ್ರಕ್ಕೆ ಶ್ರೀ.ಎಸ್.ಬಿ.ಸಿದ್ದಗಂಗಪ್ಪ, ಮುಖ್ಯ ಇಂಜಿನಿಯರ್ (ಪ್ರ), ಆಲಮಟ್ಟಿ ಅಣೆಕಟ್ಟು ವಲಯ, ಆಲಮಟ್ಟಿ ಹಾಗೂ ಶ್ರೀ.ಮಸೂದ್ ಶರೀಫ್, ಕಾರ್ಯಪಾಲಕ ಅಭಿಯಂತರರು, ತಾಂತ್ರಿಕ ಸಲಹಾ ಸಮಿತಿ, ಬೆಂಗಳೂರು, ಇವರುಗಳ ನಾಮನಿರ್ದೇಶನವನ್ನು ಸಲ್ಲಿಸಿರುತ್ತಾರೆ,

4. ಈ ಕುರಿತು ಡಾ: ವೈ.ಕೆ. ಮೂರ್ತಿರವರ ಸಲಹೆಗಳನ್ನೊಳಗೊಂಡಂತೆ, ಅಧೀಕ್ಷಕ ಅಭಿಯಂತರರು, ಉಸ್ತುವಾರಿ ಮತ್ತು ಮೌಲ್ಯಮಾಪನ, ಬೆಂಗಳೂರು ರವರು ಮೇಲೆ ಓದಲಾದ ಕ್ರ.ಸಂ. (7)ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

5. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 22 ಅಭಯೋ 2006 ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2006**

ರಾಜ್ಯದಲ್ಲಿನ 15 ಮೀಟರಿಗಿಂತ ಎತ್ತರವಿರುವ ಅಥವಾ 60 ಮಿಲಿಯನ್ ಘನ ಮೀಟರ್‌ಗಿಂತ ಹೆಚ್ಚು ನೀರು ಶೇಖರಿಸುವ ಸಾಮರ್ಥ್ಯ ಹೊಂದಿರುವ ಜಲ ಸಂಪನ್ಮೂಲ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಭಾರಿ ಅಣೆಕಟ್ಟುಗಳನ್ನು ಪರಿವೀಕ್ಷಿಸಲು ಶ್ರೀ ಎಸ್.ಬಿ. ಕೊಯಮತ್ತೂರ್ ನಿವೃತ್ತ ಅಧೀಕ್ಷಕ ಆಭಿಯಂತರ‌ರವರ ನೇತೃತ್ವದಲ್ಲಿ, ಈ ಕೆಳಕಂಡ ಎರಡು ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ತಂಡವನ್ನು ರಚಿಸಲಾಗಿದೆ.

**ಜಲ ಸಂಪನ್ಮೂಲ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಭಾರಿ ಅಣೆಕಟ್ಟೆಗಳ ಸುರಕ್ಷತಾ ಪರಿಶೀಲನಾ ತಂಡ – (ಉತ್ತರ)**

| Sl No | Name of the Member | Designation | Address | Telephone No |
|---|---|---|---|---|
| 1 | S.B. Koimattur, (Retd) S.E. Irrigation Department | Team Leader/ Advisor | Koimattur Layout, Behind Canara Bank, Narayanapura Dharwad - 580068 | 0836-2777270 9448117270 |
| 2 | Engineer in Chief, UTP, Shimoga | Member Concrete/ Masonry Structure | Upper Tunga Project, Shimoga | 08182-256749 258872 - Fax |
| 3 | Chief Engineer, HCZ, Tumkur | Member Earthen Embankment | Hemavathy Canal Zone, Tumkur | 0816-2201504 2201492 - Fax |
| 4 | Superintending Engineer, Hydrology, WRDO | Member Hydrology | O/o Chief Engineer, HYD & CMO, WRDO, Anand Rao Circle, B'lore-9 | 080-22386076 22386124 - Fax |
| 5 | R.G. Bhatt, Deputy Chief Geo-Physicist, Dept. of Mines and Geology | Member Engineering Geology/ Dam Foundation | Office of the Director, Mines & Geology, 4th Floor, Khanija Bhavan, Race Course Road, B'lore -1 | 080-22384134 Extn-284/214 9845822213 |
| 6 | Dr. B.M. Ravindra, Sr.Geologist | Member Engineering Geology/ Dam Foundation | Office of the Director, Mines & Geology, 4th Floor, Khanija Bhavan, Race Course Road, Bangalore - 1 | 080-22384134 Extn-284/214 9845822213 |
| 7 | S.B. Siddagangappa C.E. (I/c), Almatti | Member, Gates / Hoists | Almatti Dam Zone, Almatti | 08426-281038 |
| 8 | Dr. Masood Sharief, Member Secy, TAC, GOK | Member, Gates & Hoists | Office of the Chairman, Technical Advisory Committee, Opp. BWSSB Tank, Ali Asgar Road, High Grounds, B'lore-1 | 080 - 22253724 22253720 - Fax |
| 9 | Director, KERS. | Permanent Invitee | KERS, K.R.Sagara, Mandya - 571 607 | 08236-257223 |
| 10 | Superintending Engineer, Monitoring & Evaluation | Mem- Secy/ Convenor | 3rd Floor, Basava Bhavan, B'lore-1 | 080-22259764 22259985 - Fax |

**ಜಲ ಸಂಪನ್ಮೂಲ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಭಾರಿ ಅಣೆಕಟ್ಟೆಗಳ ಸುರಕ್ಷತಾ ಪರಿಶೀಲನಾ ತಂಡ – (ದಕ್ಷಿಣ)**

| Sl No | Name of the Member | Designation | Address | Telephone No |
|---|---|---|---|---|
| 1 | S.B. Koimattur, (Retd) S.E. Irrigation Department | Team Leader/ Advisor | Koimattur Layout, Behind Canara Bank, Narayanapura Dharwad - 580 068 | 0836-2777270 9448117270 |
| 2 | Chief Engineer, Irrigation (North), Belgaum | Member Concrete/ Masonry Structure | Irrigation (North), Belgaum | 0831-2422639 2422839 - Fax |

| Sl No | Name of the Member | Designation | Address | Telephone No |
|---|---|---|---|---|
| 3 | Chief Engineer, Varahi Project Zone | Member Earthen Embankment | Varahi Project, Siddapur | 08259-784240 |
| 4 | Superintending Engineer, Hydrology, WRDO | Member Hydrology | O/o Chief Engineer, HYD & CMO, WRDO, Anand Rao Circle, B'lore-9 | 080-22386076<br>22386124 - Fax |
| 5 | R.G. Bhatt, Deputy Chief Geo-Physicist, Dept. of Mines and Geology | Member Engineering Geology/<br>Dam Foundation | Office of the Director, Mines & Geology,<br>4th Floor, Khanija Bhavan, Race Course Road, Bangalore - 1 | 080-22384134<br>Extn-284/214<br>9845822213 |
| 6 | Dr. B.M. Ravindra,<br>Sr.Geologist | Member Engg Geology/<br>Dam Foundation | O/o Director, Mines & Geology, 4th Floor, Khanija Bhavan, Race Course Road, B,lore - 1 | 080-22384134<br>Extn-284/214<br>9845822213 |
| 7 | S.B. Siddagangappa<br>C.E (I/c), Almatti | Member, Gates/Hoists | Almatti Dam Zone, Almatti | 08426-281038 |
| 8 | Dr. Masood Sharief, Member Secy, TAC, GOK | Member, Gates & Hoists | O/o Chairman, Technical Advisory Committee, Opp. BWSSB Tank, Ali Asgar Road, High Grounds, B'lore-1 | 080 - 22253724<br>22253720 - Fax |
| 9 | Director, KERS. | Permanent Invitee | KERS, K.R. Sagara Mandya 571 607 | 08236-257223 |
| 10 | Superintending Engineer, Monitoring & Evaluation | Mem- Secy/ Convenor | 3rd Floor, Basava Bhavan, Bangalore-1 | 080-22259764<br>22259985 - Fax |

ಈ ತಂಡವು ಡಿ.ಎಸ್.ಆರ್.ಪಿ.ಯ ಮೇಲ್ವಿಚಾರಣೆಯಲ್ಲಿ ಕೆಳಕಂಡ ನಿಬಂಧನೆಗಳಿಗೆ ಅನುಸಾರವಾಗಿ ಕಾರ್ಯನಿರ್ವಹಿಸುತ್ತದೆ.

ಅ) ವಲಯಗಳಿಗೆ ಕಾರ್ಯಭೃತ ಮುಖ್ಯ ಅಭಿಯಂತರನ್ನು ಸ್ಥಳನಿಯುಕ್ತಿಗೊಳಿಸುವವರೆಗೆ, ಶ್ರೀ ಎಸ್.ಬಿ. ಕೊಯಮತ್ತೂರ್ ರವರು ತಾತ್ಕಾಲಿಕವಾಗಿ ತಂಡದ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸಲಿದ್ದು ತದನಂತರ ಸಲಹೆಗಾರರಾಗಿ ಮುಂದುವರೆಯುತ್ತಾರೆ.

ಅ. ತಂಡವು ಕೇಂದ್ರ ಜಲ ಆಯೋಗದ ಅಣೆಕಟ್ಟು ಸುರಕ್ಷಣಾ ಕಾರ್ಯ ವಿಧಾನದ ವರದಿಯ ಕಂಡಿಕೆ 4.3.1.6 ರಲ್ಲಿ ನಮೂದಿಸಿರುವಂತೆ ಅಣೆಕಟ್ಟು ಸುರಕ್ಷತೆಗೆ ಸಂಬಂಧಿಸಿದಂತೆ ರಾಜ್ಯದಲ್ಲಿನ 15 ಮೀಟರ್ ಗಿಂತ ಎತ್ತರವಿರುವ ಅಣೆಕಟ್ಟುಗಳು ಮತ್ತು 60 ಮಿ.ಘ.ಮೀ.ಗಿಂತ ಹೆಚ್ಚು ನೀರು ಶೇಖರಣಾ ಸಾಮರ್ಥ್ಯ ಹೊಂದಿರುವ ಅಣೆಕಟ್ಟುಗಳ ಸುರಕ್ಷತೆಯನ್ನು 10 ವರ್ಷಗಳಿಗೊಮ್ಮೆ ಪರಿಶೀಲಿಸುತ್ತದೆ.

ಆ. ನೀರಾವರಿ ಇಲಾಖೆಯ ಕಾರ್ಯದರ್ಶಿ ಹಾಗೂ ಉಪ ಕಾರ್ಯದರ್ಶಿ ಯವರನ್ನೊಳಗೊಂಡ ಕೇಂದ್ರ ಕಾರ್ಯಕಾರಿ ತಂಡವು ಸಮಿತಿಯು ಕೈಗೊಳ್ಳಬೇಕಾದ ಪರಿವೀಕ್ಷಣೆಗೆ ಅಣೆಕಟ್ಟುಗಳ ಆಧ್ಯತಾ ಪಟ್ಟಿಗೆ ಅನುಮೋದನೆ ನೀಡುವುದು.

ಇ. ತಂಡವು ಯೋಜನೆಗಳನ್ನು ಪರಿವೀಕ್ಷಣೆ ಮಾಡುವ ಸಂದರ್ಭಗಳಲ್ಲಿ ಸಂಬಂಧಪಟ್ಟ ಮುಖ್ಯ ಇಂಜಿನಿಯರ್‌ರವರು, ಸಮಿತಿಯ ಅಧಿಕಾರೇತರ ಸದಸ್ಯರ ಪ್ರವಾಸಕ್ಕೆ ಎಲ್ಲಾ ವ್ಯವಸ್ಥೆಗಳನ್ನು ಮಾಡುವುದು.

ಈ. ತಂಡದ ಅಧಿಕಾರೇತರ ಸದಸ್ಯರು ಪರಿವೀಕ್ಷಣೆಯ ನಿಮಿತ್ತ ಕೇಂದ್ರ ಸ್ಥಾನದಿಂದ ಹೊರಗಡೆ ಪ್ರಯಾಣ ಮಾಡಿದಾಗ ಪ್ರವಾಸ ಭತ್ಯೆ ಹಾಗೂ ದಿನ ಭತ್ಯೆಯನ್ನು ಸಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000 ದಿ: 3–2–2001 ರಂತೆ ನಿಯಂತ್ರಿಸುವುದು. ಇದಲ್ಲದೆ, ಸಭೆಗಳಲ್ಲಿ ಭಾಗವಹಿಸಿದ/ಪರಿವೀಕ್ಷಣೆಯ ಸಂದರ್ಭದಲ್ಲಿ ತಂಡದ ಅಧಿಕಾರೇತರ ಸದಸ್ಯರಿಗೆ ಪ್ರತಿ ಭೇಟಿಗೆ ರೂ.5000/– (ಐದು ಸಾವಿರ ರೂಪಾಯಿಗಳು) ಗಳಂತೆ ಸಭಾ ಭತ್ಯೆಯನ್ನು ಪಡೆಯುತ್ತಾರೆ. ಈ ಸಭಾ ಭತ್ಯೆಯನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ/876/ಅಕೋ–1/2006 ದಿನಾಂಕ 16–10–06 ರಲ್ಲಿ ಹಾಗೂ ಲೋಇ/1082/ಅಕೋ–1/2006 ದಿನಾಂಕ: 25–11–06ರಲ್ಲಿ ನೀಡಿರುವ ಸಹಮತಿಯೊಂದಿಗೆ ನಿಗದಿಪಡಿಸಲಾಗಿದೆ.

ಉ. ಅಧಿಕಾರೇತರ ಸದಸ್ಯರಿಗೆ ದಿನ ಭತ್ಯೆ ಹಾಗೂ ಸಭಾ ಭತ್ಯೆಯನ್ನು ಲೆಕ್ಕ ಮಾಡಲು ಅವರ ನಿವಾಸದಿಂದ ಹೊರಟು ಮತ್ತೆ ಅವರ ನಿವಾಸಕ್ಕೆ ಹಿಂದಿರುಗುವವರೆಗಿನ ಅವಧಿಯನ್ನು 24 ಘಂಟೆಗಳ ಲೆಕ್ಕದಲ್ಲಿ ಪರಿಗಣಿಸಲಾಗುವುದು (6 ಘಂಟೆಗಳಿಗಿಂತ ಕಡಿಮೆ ಅವಧಿಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ).

ಊ. ಅಧಿಕಾರೇತರ ಸದಸ್ಯರ ಪ್ರಯಾಣ ಭತ್ಯೆ ಮತ್ತು ಸಭಾ ಭತ್ಯೆಗಳ ವೆಚ್ಚವನ್ನು ಸಂಬಂಧಪಟ್ಟ ಯೋಜನೆಗಳಡಿಯಲ್ಲಿ ಬರಿಸತಕ್ಕದ್ದು. ಸಂಬಂಧಪಟ್ಟ ಮುಖ್ಯ ಇಂಜಿನಿಯರ್ ರವರು ಅಧಿಕಾರೇತರ ಸದಸ್ಯರ ಪ್ರಯಾಣ ಭತ್ಯೆ/ದಿನ ಭತ್ಯೆ, ಸಭಾ ಭತ್ಯೆಗಳ ಬಿಲ್ಲುಗಳನ್ನು ಮೇಲು ಸಹಿ ಮಾಡಿ (ಕೌಂಟರ್ ಸೈನ್) ಹಣ ಪಾವತಿ ಮಾಡಲು ಕ್ರಮ ಕೈಗೊಳ್ಳುವುದು.

ಋ. ತಂಡದ ಮುಖ್ಯಸ್ಥರು ಪರಿವೀಕ್ಷಣಾ ವರದಿಯನ್ನು ಅಂತಿಮಗೊಳಿಸಿ ಭಾಗವಹಿಸಿದ ಎಲ್ಲಾ ಸದಸ್ಯರುಗಳ ಸಹಿಯೊಡನೆ (ಮುಖ್ಯಸ್ಥರ ಸಹಿಯನ್ನೊಳಗೊಂಡಂತೆ) ವರದಿಯನ್ನು ಡಿ.ಎಸ್.ಆರ್.ಪಿ.ಗೆ ಕಳುಹಿಸಿ ಪ್ರತಿಯನ್ನು ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ, ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೆ.ಆರ್.ಸಾಗಂ ಮತ್ತು ಸಂಬಂಧಪಟ್ಟ ಮುಖ್ಯ ಇಂಜಿನಿಯರ್ ರವರಿಗೆ ಕಳುಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಪರಶುರಾಮ್**

ಪಿ.ಆರ್. 1776

ಸರ್ಕಾರದ ಉಪ ಕಾರ್ಯದರ್ಶಿ, (ಕೆ.ಬಿ.ಜೆ.ಎನ್)

ಜಲಸಂಪನ್ಮೂಲ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ಎಂ.ಪಂಚಗಟ್ಟಿ, ಸರ್ಕಾರದ ನಿವೃತ್ತ ಕಾರ್ಯದರ್ಶಿ, ನೀರಾವರಿ ಇಲಾಖೆ ಇವರನ್ನು ಮಾನ್ಯ ಉಪ ಮುಖ್ಯಮಂತ್ರಿಯವರ ಸಣ್ಣ ನೀರಾವರಿ ಖಾತೆಯ ಸಲಹೆಗಾರರನ್ನಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸುವ ಬಗ್ಗೆ

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಸಿಆಸುಇ 349 ಸಅಸೇ 2006, ದಿನಾಂಕ: 28.07.06.

2) ಅಧಿಸೂಚನೆ ಸಂಖ್ಯೆ: ಸಿಆಸುಇ 104 ಶಿಸನೇ 2006, ದಿನಾಂಕ: 10.11.06.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 28.7.2006ರ ಅಧಿಸೂಚನೆಯಲ್ಲಿ ಶ್ರೀ ಎಸ್.ಎಂ.ಪಂಚಗಟ್ಟಿ, ಸರ್ಕಾರದ ನಿವೃತ್ತ ಕಾರ್ಯದರ್ಶಿ, ನೀರಾವರಿ ಇಲಾಖೆ ಇವರನ್ನು ಮಾನ್ಯ ಉಪ ಮುಖ್ಯಮಂತ್ರಿಯವರ ಸಣ್ಣ ನೀರಾವರಿ ಖಾತೆಯ ಸಲಹೆಗಾರರನ್ನಾಗಿ ಸದರಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಪ್ರಸಕ್ತ ಉಪ ಮುಖ್ಯಮಂತ್ರಿಯವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ದಿನಾಂಕ: 10.11.2006ರ ಅಧಿಸೂಚನೆಯಲ್ಲಿ ಶ್ರೀ ಎಸ್.ಎಂ.ಪಂಚಗಟ್ಟಿ ಇವರಿಗೆ ರಾಜ್ಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಆದುದರಿಂದ ಶ್ರೀ ಎಸ್.ಎಂ.ಪಂಚಗಟ್ಟಿ, ಮಾನ್ಯ ಉಪ ಮುಖ್ಯಮಂತ್ರಿಯವರ ಸಣ್ಣ ನೀರಾವರಿ ಖಾತೆಯ ಸಲಹೆಗಾರರು ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಶಿಸನೇ 2002, ದಿನಾಂಕ: 17.06.2002ರ ಅನ್ವಯ ವೇತನ ಹಾಗೂ ಸೌಲಭ್ಯಗಳನ್ನು ನೀಡುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 349 ಸಅಸೇ 2006, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಎಸ್.ಎಂ.ಪಂಚಗಟ್ಟಿ ನಿವೃತ್ತ ಕಾರ್ಯದರ್ಶಿ, ನೀರಾವರಿ ಇಲಾಖೆ ಇವರನ್ನು ಮಾನ್ಯ ಉಪ ಮುಖ್ಯಮಂತ್ರಿಯವರ ಸಣ್ಣ ನೀರಾವರಿ ಖಾತೆಯ ಸಲಹೆಗಾರರನ್ನಾಗಿ ಗುತ್ತಿಗೆ ಆಧಾರದ ಮೇರೆಗೆ ನೇಮಿಸಿದ್ದು, ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಶಿಸನೇ 2002, ದಿನಾಂಕ: 17.6.2002ರ ಅನ್ವಯ ರಾಜ್ಯ ಸಚಿವರಿಗೆ ನೀಡಲಾಗುವ ವೇತನ ಹಾಗೂ ಸವಲತ್ತುಗಳನ್ನು ದಿನಾಂಕ: 28.7.2006 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ನೀಡಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 2168 ವೆಚ್ಚ-5/2006, ದಿನಾಂಕ: 16.12.2006 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1781

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** 2006ರ ನವೆಂಬರ್ ಮಾಹೆಯಲ್ಲಿ ಹಂಪಿಯ ಉತ್ಸವದ ಸಂದರ್ಭದಲ್ಲಿ ವಿಜಯನಗರದ ಅಧ್ಯಯನ ಎಂಬ ವಿಷಯದ ಬಗ್ಗೆ ವಿಚಾರ ಸಂಕೀರಣವನ್ನು ಏರ್ಪಡಿಸುವ ಸಂಬಂಧ ಅನುದಾನ ರೂ.2.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006, ದಿನಾಂಕ: 7.4.2006.

2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ:ಏಸಿಟಿ:1:38:ವಿಸ:2006-07, ದಿನಾಂಕ: 18.8.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 7.4.2006ರ ಸರ್ಕಾರದ ಆದೇಶದಲ್ಲಿ ವಿಜಯನಗರದ ಅಧ್ಯಯನ ವಿಚಾರ ಸಂಕಿರಣಕ್ಕಾಗಿ ರೂ.2.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ

ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 18.8.2006ರ ತಮ್ಮ ಪತ್ರದಲ್ಲಿ ಸದರಿ ವಿಚಾರ ಸಂಕಿರಣವನ್ನು ಕೈಗೊಳ್ಳಲು ಒಟ್ಟು ರೂ.2.00 ಲಕ್ಷಗಳ ವೆಚ್ಚಕ್ಕೆ ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 182 ಕೆಎಂಯು 2006, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2006**

ಸರ್ಕಾರವು 2006ರ ನವೆಂಬರ್ ಮಾಹೆಯಲ್ಲಿ ಜರುಗಲಿರುವ ವಿಜಯನಗರದ ಅಧ್ಯಯನ ಎಂಬ ವಿಚಾರ ಸಂಕಿರಣವನ್ನು ನಡೆಸುವ ಸಲುವಾಗಿ ರೂ.2.00 ಲಕ್ಷಗಳನ್ನು ವೆಚ್ಚ ಮಾಡಲು ಈ ಮೂಲಕ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಅನುಮತಿ ನೀಡುತ್ತದೆ. ಈ ಸಂಬಂಧದ ವೆಚ್ಚವನ್ನು 2006-07ರ ಲೆಕ್ಕಶೀರ್ಷಿಕೆ 2205-00-103-0-01 (ಯೋಜನೆ) 059 ಇತರ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 814 ಐಎಫ್(ಬಿಎ) 2006 ದಿನಾಂಕ: 18.9.2006 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1782

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

## ಶಿಕ್ಷಣ ಸಚಿವಾಲಯ

**ವಿಷಯ:** 2007-08ನೇ ಶೈಕ್ಷಣಿಕ ಸಾಲಿನಿಂದ ಮೈಸೂರಿನ ಮಹಾಜನ ವಿದ್ಯಾಸಂಸ್ಥೆಯ ಮಹಾಜನ ಶಿಕ್ಷಣ ಕಾಲೇಜಿಗೆ ಕಾಲೇಜಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಡಿ 155 ಯುಎಂವಿ 2005, ದಿನಾಂಕ: 20.12.2005.

2) ಎನ್.ಸಿ.ಟಿ.ಇ. ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ F.SRO/NCTE/B.Sc.Ed/2005-06/ 6549, ದಿನಾಂಕ: 20.06.2005.

3) ಮಹಾಜನ ಕಾಲೇಜಿನ ಗೌರವ ಕಾರ್ಯದರ್ಶಿಯವರ ಪತ್ರ ಸಂಖ್ಯೆ: ಮವಿಸ/ಮಪ್ರದಕಾ/ ಬಿಎಸ್ಸಿಎಡ್/ವಿಸಂ/ವಿಸಿ/ನಿರ್ದೇಶನ/2006-07, ದಿನಾಂಕ: 28.09.2006.

**ಪ್ರಸ್ತಾವನೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್./ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ 1993ರ ಎನ್.ಸಿ.ಟಿ.ಇ. ಯ ಅಧಿನಿಯಮದ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಯು ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಸರ್ಕಾರಿ ಆದೇಶ ಸಂಖ್ಯೆ: ಇಡಿ 155 ಯುಎಂವಿ 2005, ದಿನಾಂಕ: 20.12.2005ರ ದಿನಾಂಕ: 20.12.2005 ರಲ್ಲಿ ಮೈಸೂರಿನ ಮಹಾಜನ ವಿದ್ಯಾಸಂಸ್ಥೆಯ ಮಹಾಜನ ಶಿಕ್ಷಣ ಕಾಲೇಜಿನಲ್ಲಿ ಬಿ.ಎಸ್ಸಿ.ಎಡ್ ಕೋರ್ಸನ್ನು 50 (ಐವತ್ತು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು., ಎನ್.ಸಿ.ಟಿ.ಇ ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ ಸಂಖ್ಯೆ: F.SRO/NCTE/B.Sc.Ed/2005-06/ 6549, ದಿನಾಂಕ: 20.06.2006 ರಲ್ಲಿ ಎನ್.ಸಿ.ಟಿ.ಇ. ಯು ಮೈಸೂರಿನ ಮಹಾಜನ ವಿದ್ಯಾಸಂಸ್ಥೆಯ ಮಹಾಜನ ಶಿಕ್ಷಣ ಕಾಲೇಜಿಗೆ ಬಿ.ಎಸ್ಸಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಮಾನ್ಯತೆ ನೀಡಿದೆ. ಅದಕ್ಕಾಗಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 82 ಯುಎಂವಿ 2006, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2006**

3) 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಹಾಜನ ವಿದ್ಯಾಸಂಸ್ಥೆಯ ಮಹಾಜನ ಶಿಕ್ಷಣ ಕಾಲೇಜಿನ ಬಿ.ಎಸ್ಸಿ.ಎಡ್. ಕೋರ್ಸಿಗೆ 2007-08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಪಿ.ಆರ್. 1783

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).